ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳ ಮೇರು ಕೃತಿ

# ಕೃಷಿಜ್ಞಾನ ಪ್ರದೀಪಿಕೆ



ಪ್ರಕಾಶಕರು :

ಶ್ರೀಘನಮಠೇಶ ಧರ್ಮ ಪ್ರಚಾರಕ ಮಂಡಳಿ

ಶ್ರೀ ಚೆನ್ನಬಸವೇಶ್ವರ ಸಂಸ್ಥಾನ, ವಿರಕ್ತಮಠ-ನರಗುಂದ.

ಶ್ರೀ ನಜಯವರಿಂದ -

ಮಾನ್ಯಶ್ರೀ ಎಸ್.ಜಿ. ಪಾಟೀಲ

ಜಿಲ್ಲಾ ಶಿಕ್ಷಣಾಧಿಕಾರಿಗಳು

ಧಾರವಾಡ ಇವರಿಗೆ.

ಪ್ರೇಮದ ಕಾಣಿಕೆ

೨೭/೧೧/೮೧.

ಶ್ರೀ ಘನಮಠೇಶ ಗ್ರಂಥಮಾಲೆ ನಂ. ೨

ಕೃಷಿ ಋಷಿಗಳೂ, ವೈರಾಗ್ಯ ಚಕ್ರವರ್ತಿಗಳೂ ಆದ

ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳ

ಮೇರು ಕೃತಿ

# ಕೃಷಿಜ್ಞಾನ ಪ್ರದೀಪಿಕೆ

ಪ್ರಕಾಶಕರು :

ಶ್ರೀಘನಮಠೇಶ ಧರ್ಮ ಪ್ರಚಾರಕ ಮಂಡಳಿ
ವಿರಕ್ತಮಠ ನರಗುಂದ

ಫೆಬ್ರುವರಿ ೧೯೮೧

ಶ್ರೀ ನಿ. ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು
ವಿರಕ್ತಮಠಾಧಿಪತಿಗಳು ನರಗುಂದ

ಸಂಸ್ಥಾಪಕರು :
ಸಂತೆಕೆಲೂರು ಶ್ರೀಘನಮಠೇಶ ಸಂಸ್ಥಾನಮಠ
ಹೊಳೆರಕ್ಕಸಗಿ ಶ್ರೀಘನಮಠೇಶ ಪುಣ್ಯಾಶ್ರಮ
ಶ್ರೀಘನಮಠೇಶ ಧರ್ಮ ಪ್ರಚಾರಕ ಮಂಡಳದ ಸಂಸ್ಥಾಪಕರು ವ ಸಂಚಾಲಕರು

ಪ್ರಕಾಶಕರು :
ಶ್ರೀ ಘನಮಠೇಶ ಧರ್ಮ ಪ್ರಚಾರಕ ಮಂಡಳ
ಶ್ರೀ ಚನ್ನಬಸವೇಶ್ವರ ಸಂಸ್ಥಾನ, ವಿರಕ್ತಮಠ, ನರಗುಂದ

ಪ್ರಥಮ ಮುದ್ರಣ : ೧೯೬೯
ದ್ವಿತೀಯ ಮುದ್ರಣ : ಜನೇವರಿ, ೧೯೮೦
ತೃತೀಯ ಮುದ್ರಣ : ಫೆಬ್ರುವರಿ, ೧೯೮೧

ಪ್ರತಿಗಳು : ೩೦೦೦



ಬೆಲೆ : ೧೫-೦೦ (ಹದಿನೈದು) ರೂಪಾಯಿಗಳು ಮಾತ್ರ.

ಅಚ್ಚುಕೂಟ :
ರಮೇಶ ಬಿ. ಸಾವಗಾಂವಕರ ಆ್ಯಂಡ ಬ್ರದರ್ಸ
ಶಕುಂತಲಾ ಪ್ರಿಂಟರ್ಸ,
೧೯೬೨, ಗಣಪತ ಗಲ್ಲಿ,
ಬೆಳಗಾಂವಿ-೨.

# -: ಅ ರ್ಪ ಣೆ :-



ಬೆಳ್ವಲನಾಡಿನ ಪರಮ ತಪಸ್ವಿಗಳಾದ

**ಲಿಂ. ಶ್ರೀ ಚನ್ನಬಸವ ಮಹಾಶಿವಯೋಗಿಗಳು**

ವಿರಕ್ತಮಠ, ನರಗುಂದ ಅವರ ಪವಿತ್ರ ಪಾದಾರವಿಂದಗಳಿಗೆ

ಭಕ್ತಿಪೂರ್ವಕ ಅರ್ಪಣೆ

-ಪ್ರಕಾಶಕರು.

# ಕೃತಿಗೆ ಮೊದಲು

ಕೃಷಿ ಋಷಿಗಳಾದ ಶ್ರೀ ಘನಮಠೇಶ್ವರ ಚರಿತ್ರೆಯನ್ನು ಕರ್ನಾಟಕ ಹಾಗೂ ಆಂಧ್ರಪ್ರದೇಶದಲ್ಲಿ ಕೇಳಿ ತಿಳಿಯದವರಾರು? ವೈರಾಗ್ಯ ಚಕ್ರವರ್ತಿ-ಯೆಂದು ಕೃಷಿಜ್ಞಾನ ಸಂಜೀವಿನಿ ಚರ ಜಂಗಮರೆಂದು ಸಾರುವ ಅವರ ಕೀರ್ತಿ ಧ್ವಜವೂ ಎಲ್ಲೆಡೆಯಲ್ಲಿಯೂ ನಿರಂತರ ಹಾರಾಡುತ್ತಲೇ ಇದೆ. ಇಂದಿಗೆ ನೂರಿ-ಪ್ಪತ್ತೈದು ವರ್ಷಗಳ ಹಿಂದೆ ಧರ್ಮ ಜಾಗೃತೆಗಾಗಿ ಸಂಚರಿಸುತ್ತಿರುವಾಗ ನಮ್ಮ ಜನತೆಯ ಭವಣೆ ನೋಡಿ ಕರುಣಾಮೂರ್ತಿಗಳಾದ ಶ್ರೀ ಶಿವಯೋಗಿಗಳು ಬಿಜಾಪೂರ ಜಿಲ್ಲೆಯ ಕುಂಟೋಜಿ ಸಜ್ಜನ ಸದ್ಭಕ್ತರ ತೋಟದಲ್ಲಿ ವಾಸ್ತವ್ಯ ಮಾಡಿದ್ದರು. ಬಸವಾದಿ ಪ್ರಪಥರ ವಚನ ಶಾಸ್ತ್ರ ಬೋಧಿಸುತ್ತಿದ್ದರು. ಶ್ರೀ-ಮನ್ನಿಜಗುಣ ಶಿವಯೋಗಿಗಳ ಷಟ್ ಶಾಸ್ತ್ರ ಕೇವಲ ನೆತ್ತಿಯನ್ನು ತುಂಬಿ ಮುಕ್ತರನ್ನಾಗಿ ಮಾಡಬಹುದು. ಆದರೆ ಘನಮಠೇಶ್ವರ ಈ ಕೃಷಿಶಾಸ್ತ್ರ ಮೊದಲು ಸಮಸ್ತ ಜನತೆಯ ಹೊಟ್ಟೆಯನ್ನು ತುಂಬಿ ಎಲ್ಲರ ಜೀವನೋದ್ಧಾರ ಶಾಂತ-ಗೊಳಿಸಿ ನೆತ್ತಿಯ ಅಧ್ಯಾತ್ಮ ಶಾಸ್ತ್ರವನ್ನು ತಮ್ಮ ತತ್ವ ಪದಗಳ ಮುಖಾಂತರ ಅಲ್ಲದೆ ಬ್ರಹ್ಮಾಂಡ ಕೃಷಿ ಪಿಂಡಾಂಡ ಕೃಷಿಯನ್ನು ಚೆನ್ನಾಗಿ ಬೋಧಿಸಿದ್ದಾರೆ.

ಇವರ ಲೌಕಿಕ ಹಾಗೂ ಅಧ್ಯಾತ್ಮಿಕ ಜಾಣ್ಮೆಯು ಬಹು ಚೆನ್ನಾಗಿತ್ತೆಂದು ಹೇಳಬಹುದು. ೧೯ ನೇ ಶತಮಾನದಲ್ಲಿ ॥ ಶ್ರೀ ಗುರು ಬಸವಲಿಂಗಾಯನಮಃ ॥ ಎಂಬ ಮಹಾ ಮಂತ್ರವು ಜನತೆಯ ನಾಲಿಗೆಯ ಮೇಲೆ ಊಳಿಸಿದರೆಂದು ಲಿಂಗೈಕ್ಯ ಹಾನಗಲ್ ಶ್ರೀ ಕುಮಾರ ಶಿವಯೋಗಿಗಳು ಅಪ್ಪಣೆ ಕೊಡಿಸುತ್ತಿದ್ದರೆಂದು ತಿಳಿದು ಬರುತ್ತದೆ. ಕಾಲ ಕಾಲಕ್ಕೆ ಮಹಾಪುರುಷರು ಅವತರಿಸಿ ಧರ್ಮತತ್ವ, ಸಂಸ್ಕೃತಿ ಶರಣರ ಕಾಯಕನಿಷ್ಠೆ ಉಳಿಸಿಕೊಂಡು ಬಂದಿದ್ದಾರೆ.

ಕರ್ನಾಟಕದ ಸಮಗ್ರ ಮಠಾಧೀಶರಿಗೆ ಶ್ರೀ ಘನಮಠದಾರ್ಯರ ತತ್ವ ಆದರ್ಶಮಯವಾಗಿದೆ. ಶ್ರೀ ಘನಮಠೇಶ್ವರ ಪುರಾಣದಲ್ಲಿ ಚಿತ್ರಿಸಿದಂತೆ ಅವರ ತತ್ವ ಆದರ್ಶಮಯವಾಗಿದೆ. ಚಿತ್ತರಗಿ ಶ್ರೀ ಲಿಂ॥ ವಿಜಯ ಮಹಾಂತಶಿವ-ಯೋಗಿಗಳವರ ಅಡ್ಡ ಪಲ್ಲಕ್ಕಿ ಮಹೋತ್ಸವ ಇಲಕಲ್ ನಗರದಲ್ಲಿ ಒಳ್ಳೆಯ ಸಂಭ್ರಮದಿಂದ ಸಾಗಿತ್ತು. ಈ ಪ್ರಸಂಗದಲ್ಲಿ ಹುನಗುಂದ ಮಾರ್ಗವಾಗಿ ಇಲಕಲ್ಲಿಗೆ ದಯ ಮಾಡಿಸಿದ್ದರು. ಶ್ರೀ ವಿಜಯ ಮಹಾಂತ ಶಿವಯೋಗಿಗಳಿಂದ "ಅಡ್ಡಪಲ್ಲಕ್ಕಿ" ಏರಿದುದು ಅದೇ ಮೊದಲು ಅದೇ ಕಡೆ ಎಂಬ ವಚನ ಭಿಕ್ಷೆಯನ್ನು ಪಡೆದರು. ಇದರಂತೆ ನಿರುಡಗುಂಬದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ನೀರಲ್ಕೇರಿ ಶ್ರೀ ಬಸವಲಿಂಗ ಶರಣರು, ಕೊಡಗಲಿ ಶ್ರೀ ಮಹಾಲಿಂಗ ಸ್ವಾಮಿಗಳು, ತಾಳಿಕೋಟಿ ಖಾಸಗತಿ ಶಿವಯೋಗಿಗಳು, ನಿಡಗುಂದಿಯ ಕಾಲ-ಕಾಲೇಶ್ವರ

ಶಿವಯೋಗಿಗಳು, ಬಳ್ಳಾರಿ ಸಕ್ಕರಿ ಕರಡೆಪ್ಪನವರ, ಶಂಷಾಬಾದ ಶ್ರೀ ಚನ್ನಬಸವ ಮಹಾಸ್ವಾಮಿಗಳು, ಅಲ್ಲದೇ ಅನೇಕ ಗುರು ವಿರಕ್ತ ಸ್ವಾಮಿಗಳಿಗೆಲ್ಲ ಇವರ ತತ್ವ ರಾಷ್ಟ್ರೀಯ ಹೆದ್ದಾರಿಯಾಗಿದೆಯೆಂದು ಹೇಳಬಹುದು.

ಮೂವತ್ತೈದು ವರ್ಷಗಳಷ್ಟು ನಿಡುಗಾಲ ಪಾದಯಾತ್ರೆ ಮಾಡಿದ ಕೀರ್ತಿ ಇವರದು. ಇವರ ಈ ಆದರ್ಶವನ್ನು ಹಿಂದಕ್ಕೆ ಹಾಕಿದವರಲ್ಲ. ವಿನೋಬಾ ಅವರಿಗಿಂತ ದೀರ್ಘಕಾಲ ಪ್ರಯಾಣ ಮಾಡಿ ಲಕ್ಷಾಂತರ ಜನರಿಗೆ ಹಿತ ಬೋಧೆ-ಯನ್ನು ಮಾಡಿದ ಮಹಾಮಣಿಹ ಇವರದು. "ಕೃಷಿಜ್ಞಾನ ಪ್ರದೀಪಿಕೆ" ಯಲ್ಲಿ ಒಕ್ಕಲಿಗ ಜಗತ್ತಿನ "ಜಗದ್ಗುರು" ವೆಂದು ಸಾರುವ ಇವರ ಧ್ಯೇಯ–ಧೋರಣೆ ಬಹು ವಿಶಾಲವಾಗಿತ್ತೆಂದು ಅನಿಸುತ್ತದೆ. ಅಸಿ, ಮಸಿ ಕೃಷಿ ವಾಣಿಜ್ಯ, ಗೋಸೇವೆ ಯಾಚನೆ ಮೊದಲಾದ ಕಾಯಕನಿಷ್ಠೆ ತಿಳಿದುಕೊಂಡು ಇವರೆಲ್ಲರೂ ಬದುಕಬೇಕಾದರೆ ಕೃಷಿ ಕಾಯಕ ಶ್ರೇಷ್ಠವೆಂದು ಬ್ರಹ್ಮಾಂಡದ ಜನತೆಗೆಲ್ಲ ಅರ್ಥವಾಗುವಂತೆ ಬರೆದಿದ್ದಾರೆ.

ಈ ಬೃಹದ್ಗ್ರಂಥದ ಹಸ್ತ ಪ್ರತಿಯು ೧೯೬೫ ರಲ್ಲಿ ನಮ್ಮ ಸಂಶೋಧನೆಗೆ ದೊರೆಯಿತು. ಬಹುಜನ ಭಕ್ತರ ಬೇಡಿಕೆಯಂತೆ ಅಲ್ಲದೇ ಕರ್ನಾಟಕ ಕೃಷಿ ಇಲಾಖೆಗಳು ಸಹಕರಿಸಿದಂತೆ ತೃತೀಯ ಮುದ್ರಣ ಹೊರಬಂದುದು ಅತ್ಯವಶ್ಯ ವೆನಿಸಿದೆ. ಮತ್ತು ಈ ಗ್ರಂಥಗಳು ರಾಜ್ಯ ಸರಕಾರದ ಗ್ರಂಥಾಲಯಗಳಿಗೆ, ನಮ್ಮ ರಾಜ್ಯದ ಸಹಕಾರಿ ಸಂಘ ಸಂಸ್ಥೆಗಳಿಗೆ, ಹಾಗೂ ರಾಜ್ಯದ ಶಿಕ್ಷಣ ಇಲಾಖೆಗಳಲ್ಲಿ ಇರತಕ್ಕವುಗಳೆಂದು ನಾವು ಭಾವಿಸಿದ್ದೇವೆ. ಈ ಹೊತ್ತಿಗೆಯು ಪ್ರತಿ-ಯೊಬ್ಬರಿಗೆ ಕಾಮಧೇನು, ಕಲ್ಪವೃಕ್ಷವಾಗಿದೆ. ಇಂದಿನ ರೈತರ ಜೀವನ ತೃಪ್ತಿಗೆ ಕೃಷಿಜ್ಞಾನ ಪ್ರದೀಪಿಕೆ ನಿಜವಾದ ಮಾರ್ಗದರ್ಶನ ನೀಡುತ್ತದೆಂದು ಹೃದಯಾರೆ ಹಾರೈಸೋಣವಾಗಿದೆ.

ಶ್ರೀ ಘನಮಠ ಶಿವಯೋಗಿಗಳು ಲಿಂಗೈಕ್ಯರಾಗಿ ಇಂದಿಗೆ ೧೦೦ ವರ್ಷ ಗತಿಸಿದ ಸವಿನೆನಪಿಗಾಗಿ ಸಂತೆಕೆಲೂರು, ನರಗುಂದ ವಿರಕ್ತಮಠ, ನವಿಲುಗುಂದ ಗವಿಮಠ, ಹಡಗಲಿ ಶಿವರುದ್ರಸ್ವಾಮಿ ಮಠ, ಕನ್ನೂರು ವಿರಕ್ತೇಶ್ವರ ಮಠ, ಬೇಪೂರ ಶ್ರೀ ಶಿವರುದ್ರಸ್ವಾಮಿ ಮಠ ಮೊದಲಾದ ಕಡೆಗಳಲ್ಲಿ ಶತಮಾನೋತ್ಸವ ಆಚರಿಸಲಾಗಿದೆ.

**ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು,**
ವಿರಕ್ತಮಠ – ನರಗುಂದ
ಶ್ರೀ ಘನಮಠೇಶ ಧರ್ಮಪ್ರಚಾರಕ ಮಂಡಳಿಯ
ಸಂಸ್ಥಾಪಕರು, ಸಂಚಾಲಕರು.



**ಶ್ರೀ ನಿ. ಮಲ್ಲಿಕಾರ್ಜುನ ಮಹಾಸ್ವಾಮಿಗಳು**

**ವಿರಕ್ತಮಠ, ನರಗುಂದ**

ಶ್ರೀ ಘನಮಠೇಶ ಧರ್ಮ ಪ್ರಚಾರಕ ಮಂಡಳಿಯ ಸಂಸ್ಥಾಪಕರು.

# ಮುನ್ನುಡಿ

ರಾಯಚೂರ ಜಿಲ್ಹೆಯ ಸಂತೆಕೆಲ್ಲೂರು ಶ್ರೀ ಘನಮಠೇಶರ ಪುಣ್ಯಾಶ್ರಮ ಸಂಸ್ಥಾಪಕರೂ, ಬೆಳಲ್ವನಾಡಿನ ಐತಿಹಾಸಿಕ ನರಗುಂದ ಶ್ರೀ ಚೆನ್ನಬಸವೇಶ್ವರ ವಿರಕ್ತಮಠಾಧ್ಯಕ್ಷರೂ ಶ್ರೀ ಘನಮಠೇಶರ ಧರ್ಮ ಪ್ರಚಾರಕ ಮಂಡಳದ ಸಂಚಾಲಕರೂ ಆದ, ಶಿವಾನುಭವಚರವರ್ಯ ಪೂಜ್ಯ ಶ್ರೀ ಮ. ನಿ. ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳಿಂದ "ಕೃಷಿಜ್ಞಾನ ಪ್ರದೀಪಿಕೆ" ಎಂಬ ಈ ಬೃಹದ್ಗ್ರಂಥ ೧೯೦೯ ರಲ್ಲಿ ಪ್ರಥಮ ಮುದ್ರಣವಾಗಿದ್ದು, ದ್ವಿತೀಯ ಮುದ್ರಣ ೧೯೬೦ ರಲ್ಲಿ ಆಯಿತು. ಈಗ ತೃತೀಯ ಮುದ್ರಣ ಕೆಲಸ ನಡೆಯುತ್ತಿದೆ, ಎಂಬುದನ್ನು ತಿಳಿದು ಈ ತೃತೀಯ ಮುದ್ರಣಕ್ಕೆ ಮುನ್ನುಡಿ ಬರೆದುಕೊಡಲು ನನಗೆ ತುಂಬಾ ಸಂತೋಷವೆನಿಸುತ್ತದೆ.

ಈ ಗ್ರಂಥವು ಈಗ ತೃತೀಯ ಮುದ್ರಣದಲ್ಲಿರುವದರಿಂದ ಇದರ ಉಪಯುಕ್ತತೆ ಕೃಷಿಕ ಜನ ಸಮೂಹಕ್ಕೆ ಬಹಳವಾದುದೆಂದು ತಿಳಿಯುತ್ತದೆ. "ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು" ಎಂಬ ನಾಣ್ಣುಡಿಯಂತೆ ಇಂದಿನ ಕೃಷಿಕ ಜನರಲ್ಲಿ ಜಾಗೃತಿಯನ್ನುಂಟು ಮಾಡಲು ಈ ಗ್ರಂಥದ ಅವಶ್ಯಕತೆ ಬಹಳವಾಗಿದೆ. ಏಕೆಂದರೆ ಕೃಷಿಯಲ್ಲಿ ಯಾವ ಲೇಖನಗಳೂ ಇಲ್ಲದ ಆ ಕಾಲದಲ್ಲಿ ಕೃಷಿಯ ಬಗ್ಗೆ ಎಲ್ಲ ವಿಷಯಗಳನ್ನು ಕೃಷಿಕ ಜನರಿಗೆ ಅರ್ಥವಾಗುವ ಸಾಮಾನ್ಯ ರೈತರ ಭಾಷೆಯನ್ನೇ ಉಪಯೋಗಿಸಿ, ಬಹಳ ಸುಲಲಿತವಾಗಿ ಶಿವಯೋಗಿಗಳು ಬರೆದಿದ್ದಾರೆ.

೧೯೪೭ ರಲ್ಲಿ ಹಿಂದಿನ ಮುಂಬಯಿ ಸರ್ಕಾರವು ನಿಯಮಿಸಿದ ಭೂಸುಧಾರಣಾ ವಿಚಾರಣಾ ಆಯೋಗವು ತನ್ನ ವರದಿಯಲ್ಲಿ ಈ ಗ್ರಂಥದಲ್ಲಿರುವ ಉಪಯುಕ್ತ ವಿಷಯಗಳನ್ನು ಗಮನಕ್ಕೆ ತೆಗೆದುಕೊಂಡಿರುವದು ಈ ಗ್ರಂಥದ ಮಹತ್ವವನ್ನು ಸೂಚಿಸುತ್ತದೆ. ಈಗಿನ ವಿಜ್ಞಾನ ಯುಗದಲ್ಲಿ ಕೃಷಿಯಲ್ಲಿ ಸಂಶೋಧನೆ ನಡೆಸುವ ವಿಜ್ಞಾನಿಗಳಿಗೂ ಸಹ ಮೂಲ ಗ್ರಂಥವಾಗಿ ಈ ಗ್ರಂಥವು ನೆರವಾಗುವದರಲ್ಲಿ ಯಾವ ಸಂದೇಹವಿಲ್ಲ. ಹಾಗೂ ಕೃಷಿ ಸಂಶೋಧನೆಯ ಫಲಿತಾಂಶಗಳೂ ಸಹ ಈ ಗ್ರಂಥದಲ್ಲಿ ತಿಳಿಸಿರುವ ಕೆಲವು ವಿಚಾರಗಳನ್ನು ಸಮರ್ಥಿಸುತ್ತವೆ.

ನಿಜವಾದ ಕೃಷಿ ಹಾಗೂ ಪಾರಮಾರ್ಥಿಕ ಕೃಷಿ ಇವೆರಡರಲ್ಲಿಯೂ ಶಿವಯೋಗಿಗಳಿಗೆ ಸಮಾನಪ್ರಭುತ್ವವಿದ್ದಿತೆಂಬುದು ಈ ಗ್ರಂಥದಲ್ಲಿ ವಿದಿತವಾಗುತ್ತದೆ. ನನ್ನಂತಹವರಿಗೆ ಒಕ್ಕಲುತನದ ಮೇಲೆ ಮಾತ್ರ ಬರೆಯಲು ಸಾಧ್ಯ. ಅನೇಕ ಶಿವಯೋಗಿಗಳಿಗೆ ಪಾರಮಾರ್ಥಿಕ ಕೃಷಿಯ ಜ್ಞಾನ ಮಾತ್ರ ಇರುತ್ತದೆ. ಆದರೆ ಏಕ-

ಕಾಲದಲ್ಲಿ ಶಿವಯೋಗಿ ಮತ್ತು ನೇಗಿಲ ಯೋಗಿ ಎರಡೂ ಆಗಿದ್ದ ಶ್ರೀ ಶ್ರೀ ಘನಮಠೇಶ ಶಿವಯೋಗಿಗಳಂಥವರು ಬಹಳ ವಿರಳ.

ಮೊದಲನೇ ಪ್ರಕರಣದಲ್ಲಿ ತಿಳಿಸಿರುವದು ಅನುಭವ ಸಾರ ಹೇಳುತ್ತದೆ. "ವೈಗಳ್ಳರಾದ ಮನುಷ್ಯರುಗಳನ್ನು, ಬಲಹೀನವಾದ ಎತ್ತುಗಳನ್ನು ಬಿಟ್ಟು ತ್ರಾಣ-ಪ್ರಳ್ಳ ಪುಷ್ಟವಾದ ಎತ್ತುಗಳನ್ನೂ, ಬಲಿಷ್ಠವಾದ ಹಾಗೂ ನಿಷ್ಠಾವಂತರಾಗಿ ಕೆಲಸ ಮಾಡುವ ಮನುಷ್ಯರುಗಳನ್ನು ಮತ್ತು ಉತ್ತಮವಾದ, ಗಟ್ಟಿಯಾದ, ಹದವಾದ, ಮೊನೆಯಾದ ವ್ಯವಸಾಯ ಉಪಕರಣಗಳನ್ನು ಸಿದ್ಧಪಡಿಸಿಕೊಂಡು ವ್ಯವಸಾಯ-ವನ್ನು ಮಾಡಲು ಪ್ರಾರಂಭಿಸಬೇಕು" ಈ ಒಂದು ಅನುಭವ ಸಾರ ಆಗಿನ ಕಾಲಕ್ಕೆ ಅಲ್ಲದೆ ಇಂದಿಗೂ ಹಾಗೂ ಎಂದೆಂದಿಗೂ ಪ್ರತಿಯೊಬ್ಬ ರೈತರೂ ನೆನಪಿಟ್ಟು ಕಾರ್ಯಾಚರಣೆ ಮಾಡಬೇಕಾದ ವಿಷಯ. ಇದರ ಬಗ್ಗೆ ಇನ್ನೂ ಹೇಳಬೇಕೆಂದರೆ ನಮ್ಮ ಕೃಷಿ ವಿಜ್ಞಾನ ಎಷ್ಟೇ ಮುಂದುವರಿದರೂ ಹೊಸದಾಗಿ ಕಂಡುಹಿಡಿದಂತಹ ಸಂಶೋಧನೆಯನ್ನು ಕಾರ್ಯಗತವಾಗಿ ಹೊಲದಲ್ಲಿ ಅಳವಡಿಸಿ ಅದರ ಉಪಯೋಗ ವನ್ನು ಪಡೆಯಬೇಕಾದರೂ ಈ ಒಂದು ಅನುಭವ ಸಾರದ ಮಾತನ್ನು ಮರೆಯದೇ ನೆನಪಿಟ್ಟುಕೊಂಡು ಮಾಡಿದಲ್ಲಿ ಮಾತ್ರ ಯಶಸ್ಸು ಖಂಡಿತ.

ರೈತರು ತಮ್ಮ ಕೃಷಿ ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳಬೇಕಾಗಿದ್ದಲ್ಲಿ ವ್ಯವಸಾಯಕ್ಕೆ ಬೇಕಾಗುವ ಸಾಮಗ್ರಿಗಳನ್ನು ತಂದು ಕೊಟ್ಟು ಕೆಲಸಕ್ಕೆ ಆಳುಗಳನ್ನು ಕಳುಹಿಸಿದರೆ ಸಾಲದು, ತಾನು ಸ್ವತಃ ಕೆಲಸದಲ್ಲಿ ನಿತ್ಯವೂ ತೊಡಗಿದ್ದು, ಆಳುಗಳು ಮಾಡಿದ ಕೆಲಸವನ್ನು ವಿಚಾರಿಸುತ್ತಿರಬೇಕು. ಇದರ ಅಂಗವಾಗಿ ಶಿವಯೋಗಿ-ಗಳು ತಿಳಿಸುವ ಗಾದೆಯನ್ನು ಇಲ್ಲಿ ಸ್ಮರಿಸಬಹುದು "ತಾನು ಮಾಡಿದ್ದು ಉತ್ತಮ, ಮಗನು ಮಾಡಿದ್ದು ಮಧ್ಯಮ, ಆಳು ಮಾಡಿದ್ದು ಹಾಳು" ಮತ್ತು "ಆಳಾಗಿ ದುಡಿ ದವನು ಅರಸನಾಗಿ ಉಂಡಾನು".

ಈಗಿನ ಆಧುನಿಕ ಕೃಷಿಯಲ್ಲಿ ಒಂದು ಮಳೆ ಬಾರದಿದ್ದು ಮತ್ತೊಂದು ಮಳೆ ಬಂದಲ್ಲಿ ರೈತರು ಉಪಯೋಗಿಸಬೇಕಾದ ಬೆಳೆ ತಳಿ ಮುಂತಾದವುಗಳನ್ನು ಹೇಳುವಂತೆ ಶಿವಯೋಗಿಗಳ ಕಾಲದಲ್ಲಿಯೂ ಸಹ ಹೇಳುತ್ತಿದ್ದುದನ್ನು ನಾವು ಇಲ್ಲಿ ನೋಡಬಹುದು. ಅಂದರೆ ೬ ನೇ ಪ್ರಕರಣದಲ್ಲಿ ಒಂದು ಕಡೆ ಹೇಳಿದ್ದಾರೆ "ಮೃಗಶಿರ, ಆರಿದ್ರಾ ಈ ಎರಡು ಮಳೆಗಳು ಹಸಿ ಮಾಡದೇ ಹೋದರೆ ಆ ಭೂಮಿಗೆ ಪುಷ್ಯ, ಪುನರ್ವಸು ಮಳೆಗಳಲ್ಲಿ ಮುಂಗಾರಿಯನ್ನು ಬಿತ್ತಬೇಕು. ಮೃಗಶಿರದಿಂದ ಪುಷ್ಯ, ಪುನರ್ವಸು ಮಳೆಗಳ ಅಂತ್ಯದವರೆಗೂ ಹಸಿಯಾಗದೆ ಆಶ್ಲೇಷ, ಮಾಘ ಮಳೆಯಲ್ಲಿ ಹಸಿಯಾದರೆ ಬಹಳವಾಗಿ ಸಜ್ಜೆಯನ್ನು ಸ್ವಲ್ಪ ಜೋಳವನ್ನು ಕೂಡಿಸಿ ಬಿತ್ತಬೇಕು. ಅಷ್ಟರಲ್ಲಿ ಹಸಿಯಾಗದೆ ಹೋದರೆ ಅದಕ್ಕೆ ಕಡ್ಲೆಯನ್ನು ಬಿತ್ತಬೇಕು. ಮತ್ತೊಂದು ಮಾತನ್ನು ಬೀಜದ ವಿಷಯದಲ್ಲಿ ತಿಳಿಸುತ್ತಾರೆ "ಸ್ವಲ್ಪ ಮಹನತ್ತಾದರೂ

(ಕಷ್ಟವಾದರೂ) ಚಿಂತೆಯಿಲ್ಲ ದೂರವಾದರೂ ಹೋಗಿ ಇದ್ದಲ್ಲಿ ಒಳ್ಳೆಯ ಗದ್ದೆಯ ನೆಲ್ಲಿನ ಬೀಜವನ್ನು ತಂದು ಬಿತ್ತಬೇಕು". ಇದು ಇಂದಿನ ಕೃಷಿ ವಿಜ್ಞಾನದಲ್ಲಿ ಹೇಳುವ "ಉತ್ತಮ ಬೀಜದಿಂದ ಉತ್ತಮ ಬೆಳೆ" ಎಂಬ ಮಾತೇ ಅಲ್ಲದೆ ಮತ್ತೇನು ?

ಭೂಮಿಯ ಫಲವತ್ತತೆಯನ್ನು ಹೆಚ್ಚಿಸುವುದರ ಬಗ್ಗೆ ಈ ರೀತಿ ಹೇಳಿದ್ದಾರೆ "ಭೂಮಿಯನ್ನು ವಿಶ್ವಾಸದಿಂದ ನಂಬಿ ಭೂಮಿಯ ಅಭಿವೃದ್ಧಿಗೆ ಖರ್ಚು ಮಾಡಿದ ದ್ರವ್ಯವು, ಮೆಹನತ್ತು ಮಾಡಿದ ಶ್ರಮವು ಫಲವನ್ನು ಕೊಡದೇ ಹೋಗದು" ಎಂದು ಖಚಿತವಾಗಿ ಹೇಳಿದ್ದಾರೆ.

ಹೊಲಗಳಲ್ಲಿ ಬರುವ ಮುಖ್ಯ ಕಳೆಗಳಾದ ಕರಿಕೆ, ಜೇಕು ಮುಂತಾದ ಕಳೆಗಳ ಬಗ್ಗೆ ಗಮನಕೊಟ್ಟು ವಿವರವಾಗಿ ತಿಳಿಸಿದ್ದಾರೆ. ಅಂದರೆ ಈ ಕಳೆಗಳನ್ನು ನಿರ್ಮೂಲ ಮಾಡಲು ಸಾಲವನ್ನಾದರೂ ಮಾಡಿ ಭೂಮಿಯ ನಟ್ಟನ್ನು ಕಡಿಸ-ಬೇಕೆಂದು ಶಿವಯೋಗಿಗಳು ತಿಳಿಸಿರುವ ವಿಷಯ ಶ್ಲಾಘನೀಯ. ಈಗಿನ ಆಧುನಿಕ ಕೃಷಿಯಲ್ಲಿ ಎಲ್ಲ ಕಳೆಗಳನ್ನು ತೆಗೆಯಲು ರಾಸಾಯನಿಕ ಕಳೆನಾಶಕಗಳನ್ನು ಕಂಡು ಹಿಡಿದಿದ್ದರೂ ಆಳವಾಗಿ ಬೇರು ಬಿಟ್ಟ ಕರಿಕೆ ಮತ್ತು ಜೇಕುಗಳನ್ನು ಸಂಪೂರ್ಣವಾಗಿ ನಾಶಮಾಡಲು ಇನ್ನೂ ಸಾಧ್ಯವಾಗಿಲ್ಲ. ಹಾಗೂ ನಟ್ಟು ಕಡಿಸುವ ಮಾರ್ಗವೇ ಈ ಕಳೆಗಳ ನಿರ್ಮೂಲನಕ್ಕೆ ಈ ಹೊತ್ತಿಗೂ ಆಧಾರವಾಗಿದೆ.

ಹೊಲಗಳಲ್ಲಿ ಒಡ್ಡಿನ ಉಪಯುಕ್ತತೆ ಹಾಗೂ ಒಡ್ಡುಗಳನ್ನು ನಿರ್ಮಿಸುವ ಬಗ್ಗೆ ಶಿವಯೋಗಿಗಳು ಬಹಳ ವಿವರವಾಗಿ ತಿಳಿಸಿದ್ದಾರೆ. ಒಡ್ಡು ಹಾಕುವ ವಿಷಯದಲ್ಲಿ ಈ ರೀತಿ ಹೇಳುತ್ತಾರೆ. "ಖರ್ಚು ಮಾಡಲು ತ್ರಾಣವಿಲ್ಲದ ಬಡವರು ಕೂಡ ಧೈರ್ಯದಿಂದ ಸಾಲ ಮಾಡಿ ಒಡ್ಡು ಹಾಕಿಸಬೇಕು" ಇದು ಒಡ್ಡಿನ ಉಪಯುಕ್ತತೆಯನ್ನು ಎತ್ತಿ ತೋರಿಸುತ್ತದೆ.

ಇನ್ನು ಖುಷ್ಕಿ ಬೇಸಾಯದ ಬಗ್ಗೆಯೂ ಶಿವಯೋಗಿಗಳು ಬಹಳ ಉಪಯುಕ್ತ ಸಲಹೆಗಳನ್ನು ಕೊಟ್ಟು ರೈತ ಸಮೂಹದ ಗಮನವನ್ನು ಸೆಳೆದಿರುವದಲ್ಲದೆ ಈ ಸಲಹೆಗಳನ್ನು ರೈತರು ಅಲ್ಪ ಮಳೆ ಆಧಾರಿತ ಬೇಸಾಯದಲ್ಲಿ ಉಪಯೋಗಿಸಲು ಬಹಳ ಉಪಯುಕ್ತವಾಗಿದೆ. ಖುಷ್ಕಿ ಬೇಸಾಯದಲ್ಲಿ ರೈತರು ಕಾಲಕ್ಕೆ ಸರಿಯಾಗಿ ಬಿತ್ತನೆ ಮಾಡುವದು ಬಹಳ ಮುಖ್ಯವಾದ ಅಂಶ ಅಂದರೆ ಹದ ತಪ್ಪಿಸಬಾರದು ಎಂದು ಹೇಳಿದ ಮಾತು ಇದು "ಬೆದೆ (ಹದ) ಬಂದ ಕಾಲದಲ್ಲಿ ಬೇಲಿಯಲ್ಲಿ ಚೆಲ್ಲಿದರೂ ಬೆಳೆಯುತ್ತದೆ" ಎಂಬ ಆಧಾರ ಉಂಟು. "ಉಡಿಯಲ್ಲಿರುವ ಕಾಳಿಗಿಂತ ಕೈಯಲ್ಲಿರುವ ಕಾಳು ಮೇಲು" ಎಂಬ ನುಡಿಯು ಬಹಳ ಅರ್ಥಗರ್ಭಿತವಾಗಿದೆ. ಶಿವಯೋಗಿಗಳು ಹೇಳುವ ಈ ಕೆಲವು ಸಂಗತಿಗಳನ್ನು ಆಧುನಿಕ ಕೃಷಿ ಬೇಸಾಯದಲ್ಲಿ ಅಳವಡಿಸಬೇಕಾಗಿದೆ.

ನೀರಾವರಿ ಬಗ್ಗೆ ಪ್ರಸ್ತಾಪಿಸುತ್ತಾ ಈ ರೀತಿ ತಿಳಿಸುತ್ತಾರೆ. "ಕ್ಷಾಮ ಹಾಗೂ ಅಭಾವ ಪರಿಸ್ಥಿತಿಗಳನ್ನು ಎದುರಿಸಬೇಕಾದರೆ ನೀರಾವರಿ ಬೇಸಾಯ ಅವಶ್ಯಕ ಪ್ರತಿಯೊಬ್ಬ ರೈತನು ತನ್ನ ಭೂಮಿಯ ಕೆಲಭಾಗದಲ್ಲಿಯಾದರೂ ನೀರಾವರಿ ಸೌಲಭ್ಯಗಳನ್ನು ಕಲ್ಪಿಸಿಕೊಳ್ಳಬೇಕು".

ತೋಟದ ಬೆಳೆಗಳಾದ ಬಾಳೆ, ನಿಂಬೆ, ತೆಂಗು, ಅಡಿಕೆ, ಮಾವು, ಕಬ್ಬು, ಗೋಡಂಬಿ, ಎಲಕ್ಕಿ, ಜೀರಿಗೆ ಮುಂತಾದವುಗಳ ಬಗ್ಗೆಯೂ ಸಹ ಶಿವಯೋಗಿ-ಗಳು ತಮ್ಮ ಅಮೂಲ್ಯವಾದ ಅನುಭವವನ್ನು ತಿಳಿಸಿದ್ದಾರೆ.

ಇನ್ನು ಪಾರಾಮಾರ್ಥಿಕ ಕೃಷಿ ಬಗ್ಗೆ ಪ್ರಸ್ತಾಪಿಸುತ್ತಾ ಶಿವಯೋಗಿಗಳು ಈ ರೀತಿ ತಿಳಿಸುತ್ತಾರೆ. ಮನುಷ್ಯರಾದ ಮೇಲೆ ಧರ್ಮಾಧರ್ಮ ವಿಚಾರವಿರಬೇಕು. ನಿತ್ಯಾನಿತ್ಯವನ್ನರಿಯಬೇಕು, ಸತ್ಕರ್ಮ ದುಷ್ಕರ್ಮಗಳ ವಿವೇಕವಿರಬೇಕು, ಪುಣ್ಯ-ಪಾಪಗಳನ್ನು ತಿಳಿಯಬೇಕು ಮತ್ತು ತನ್ನ ಹಿತವನ್ನು ಕಡೆಗಣಿಸಿ ಅನ್ಯರಹಿತ ವನ್ನು ನೋಡಬೇಕು ಹಾಗೂ ಸತ್ಯ ಸದಾಚಾರವೇ ಪ್ರಾಣವಾಗಿರಬೇಕೆಂದು ಹೇಳಿದ್ದಾರೆ.

ಕರ್ನಾಟಕದ ಕೃಷಿಕರ ಜನ ಸಮೂಹಕ್ಕೂ ಹಾಗೂ ಕೃಷಿ ಸಂಶೋಧನೆ-ಯನ್ನು ಮಾಡುವ ಕೃಷಿ ವಿಜ್ಞಾನಿಗಳಿಗೂ ಬಹಳ ಉಪಯುಕ್ತವಾದ ಈ ಗ್ರಂಥ-ವನ್ನು ತೃತೀಯ ಮುದ್ರಣವಾಗಿ ಶ್ರೀ ಘನಮಠೇಶ ಧರ್ಮ ಪ್ರಚಾರಕ ಮಂಡಳ-ದಿಂದ ಮುದ್ರಿಸಿ ಜನತೆಯ ಮುಂದಿರಿಸಿದ ಬೆಳ್ವೊಲನಾಡಿನ ನರಗುಂದ ಶ್ರೀ ಚನ್ನ ಬಸವೇಶ್ವರ ವಿರಕ್ತ ಮಠಾಧ್ಯಕ್ಷರಾದ ಪೂಜ್ಯ ಶ್ರೀ ನಿ. ಪ್ರ. ಮಲ್ಲಿಕಾರ್ಜುನ ಮಹಾ ಸ್ವಾಮಿಗಳವರು ಕರ್ನಾಟಕ ರಾಜ್ಯದ ಕೃಷಿಕ ಜನ ಸಮೂಹಕ್ಕೆಲ್ಲ ಅಭಿವಂದ್ಯರಾ ಗಿರುವರು.

ಶ್ರೀ ಘನಮಠ ಶಿವಯೋಗಿಗಳು ೧೯೬೫ ಕ್ಕೆ ಲಿಂಗೈಕ್ಯರಾಗಿ ೮೫ ವರ್ಷ ಗತಿಸಿದ್ದರೂ ಅವರ ಗದ್ದುಗೆಯ ಮೇಲೆ ಭವ್ಯವಾದ ಕಟ್ಟಡ ನಿರ್ಮಾಣವಾಗಿದ್ದಿಲ್ಲ. ಶ್ರೀ ಘನಮಠೇಶರ ಸತ್ ಸಂಕಲ್ಪದಂತೆ ಶ್ರೀಗಳವರ ಕರ್ತೃತ್ವ ಶಕ್ತಿಯಿಂದ ಶಿಲಾ ಮಠ ರಚನೆಯಾಗಿದ್ದು ಸಾರ್ವಜನಿಕರಿಗೆ ವೇದ್ಯವಾಗಿದೆ. ಇದಲ್ಲದೆ ಅಧ್ಯಾತ್ಮ ಪ್ರೇಮಿಗಳ ಸಲುವಾಗಿ ಎಷ್ಟೋ ಧಾರ್ಮಿಕ ಗ್ರಂಥಗಳನ್ನು ಅಚ್ಚು ಹಾಕಿಸಿ ಕನ್ನಡ ನಾಡಿಗೆ ಉಪಕೃತರಾಗಿದ್ದಾರೆ.

ಈ ಗ್ರಂಥವು ಕೃಷಿಕ ಜನರ ಪ್ರೀತಿಯನ್ನು ಹೆಚ್ಚಿನ ಮಟ್ಟದಲ್ಲಿ ಗಳಿಸಿ-ಕೊಂಡು ಶೀಘ್ರದಲ್ಲಿಯೇ ೪ ನೇ ಮುದ್ರಣಕ್ಕೆ ಕೋರಿಕೆ ಬರಲೆಂದು ಆಶಿಸುತ್ತೇನೆ.

ವ್ಹಿ. ಸಿ. ಕಟ್ಟಿ
ಕೃಷಿ ನಿರ್ದೇಶಕರು,
ಕರ್ನಾಟಕ ರಾಜ್ಯ.

ಬೆಂಗಳೂರು,
ದಿ. ೩೧-೧-೧೯೮೧.



ಮಾನ್ಯಶ್ರೀ ವ್ಹಿ. ಸಿ. ಕಟ್ಟಿ
ಕೃಷಿ ನಿರ್ದೇಶಕರು
ಬೆಂಗಳೂರ.

# ಸುತ್ತೋಲೆ

No. FIU. LIB. Books,
AEP/80-81

Office of the Director of
Agriculture in Karnataka,
Seshadri Road, Bangalore,
Dated : 3rd December, 80.

To,

**Shri Ghanamathesh Dharma Pracharak Mandali,**
Virakthamath
Po. : Nargund,
Dist : Dharwad.

Sir,

Sub : **Purchase of book "ಕೃಷಿಜ್ಞಾನ ಪ್ರದೀಪಿಕೆ" for the offices.**

With reference to the above, I request you to please arrange to supply 10 copies along with the bill of cost in triplicate to the offices, the list of which is enclosed herewith.

Yours faithfully,

Sd/-

for **Director of Agriculture.**

Copy to :

1. All the Assistant Directors of Agriculture of the Talukas.
2. All the principals of Rural Development Training Centres.
3. All the Dy. Directors of Agriculture, Farmers Training & Education Centres.
4. All the Agricultural Officers of Agricultural Schools.
5. All the Principal Agricultural Officers.
6. All the joint Directors of agriculture for information & necessary action.

Sd/-
for Director of the Agriculture.

# ಸಂದೇಶ

ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳು "ಕೃಷಿಜ್ಞಾನ ಪ್ರದೀಪಿಕೆ" ಎಂಬ ಗ್ರಂಥವನ್ನು ಸುಮಾರು ೧೫೦ ವರ್ಷಗಳ ಮುಂಚೆಯೇ ತಮ್ಮ ಅನುಭವ ಹಾಗೂ ಅನುಭಾವದಿಂದ ಬರೆದಿದ್ದಾರೆ. ಈ ಅಮೂಲ್ಯ ಗ್ರಂಥವನ್ನು ಬರೆದು ಅವರು ಕೃಷಿ ಲೋಕವನ್ನೇ ಕೃತಾರ್ಥವನ್ನಾಗಿ ಮಾಡಿದ್ದಾರೆ. ಕನ್ನಡದಲ್ಲಿ ಕೃಷಿಯು ಬಗ್ಗೆ ಯಾವದೇ ಒಂದು ಗ್ರಂಥ ಇರದ ಆ ಕಾಲದಲ್ಲಿ ಕೃಷಿಯ ಬಗ್ಗೆ ಎಲ್ಲಾ ವಿಷಯು ಗಳನ್ನು ಕೂಲಂಕುಶವಾಗಿ ವಿವೇಚಿಸಿದ್ದಾರೆ. ಅಂದು ಅವರು ಬರೆದ ಮೂಲ ಅಂಶಗಳು ಇಂದು ವಿಜ್ಞಾನ ಯುಗದಲ್ಲಿ ಕೂಡಾ ಒರೆಗಲ್ಲಿಗೆ ಹಚ್ಚುವಂತಿವೆ. ಇಂದು ವಿಜ್ಞಾನದ ಮೂಲಕ ಕಂಡುಹಿಡಿದ ಹಲವಾರು ಹೊಸ ಸಂಗತಿಗಳು, ಅವರ ವಿಚಾರ ಗಳನ್ನೇ ಸಮರ್ಥಿಸುತ್ತವೆ. ಅವರು ಬರೆದ ಕೆಲವು ವಿಷಯುಗಳು ತ್ರಿಕಾಲದಲ್ಲಿಯೂ ಸತ್ಯವಾದಂತವುಗಳಾಗಿವೆ.

ಇಂಥ ಅಮೌಲ್ಯ ಗ್ರಂಥವನ್ನು ನರಗುಂದ ವಿರಕ್ತಮಠದ ಶ್ರೀಗಳು ಹೊರ-ತಂದದ್ದು ಸ್ತುತ್ಯವಾಗಿದೆ.

**ಡಾ. ಎನ್. ಪಿ. ಪಾಟೀಲ**
ಕೃಷಿ ಸಂಶೋಧನಾ ನಿರ್ದೇಶಕರು (ನಿವೃತ್ತ)
ಕೃಷಿ ವಿಶ್ವವಿದ್ಯಾನಿಲಯ ಬೆಂಗಳೂರು.



"ಕೃಷಿಜ್ಞಾನ ಪ್ರದೀಪಿಕೆ" ಯು ಉತ್ತಮ ಗ್ರಂಥವೆನಿಸಿದೆ. ನಮ್ಮ ಪೂರ್ವ-ಜರು ಈ ಹೊತ್ತಿಗೆಯಲ್ಲಿ ಹೇಳಿದ ಮಹತ್ವದ ಸಂಗತಿಗಳನ್ನು ಇಂದಿನ ಪ್ರಸಂಗದಲ್ಲಿ ಅನುಷ್ಠಾನದಲ್ಲಿ ತಂದರೆ ದೇಶದ ಭವಿಷ್ಯ ಸುಧಾರಿಸುವದು. ನೂರು ವರ್ಷಗಳ ಹಿಂದೆ ಕೃಷಿ ಬಗ್ಗೆ ಶ್ರೀ ಘನಮಠೇಶರು ರಚಿಸಿದ ಈ ಹೆಬ್ಬೊತ್ತಿಗೆ ಕಾಮಧೇನು, ಕಲ್ಪವೃಕ್ಷಕ್ಕೂ ಮಿಗಿಲೆಂದು ಹೇಳಬಯಸುತ್ತೇನೆ. ಶ್ರೀ ವಿರಕ್ತಮಠಾಧೀಶರು ಪ್ರಕಾಶ ಪಡಿಸಿದ್ದು ಸಂತೋಷವೆನಿಸಿದೆ.

**ಡಾ|| ಚಂದ್ರಶೇಖರಯ್ಯ**
ಆಡಳಿತಾಧಿಕಾರಿ,
ಆಯುಕಟ್ಟು ಅಭಿವೃದ್ಧಿ ಪ್ರಾಧಿಕಾರ
ಕಾವೇರಿ ಕಣಿವೆ ಯೋಜನೆ, ಮೈಸೂರು.

# ಸದಭಿಪ್ರಾಯ

ನಮ್ಮ ದೇಶ ಭಾಂಧವರಾದ ರೈತ ಜನರಿಗೆ ಈ ಕೃಷಿ ಗ್ರಂಥದಲ್ಲಿ ಸೂಕ್ತ ವಿಚಾರಗಳನ್ನು ಕ್ರಮವರಿತು ತಿಳಿಸಿದ್ದಾರೆ. ಈ ಕೃಷಿಜ್ಞಾನ ಪ್ರದೀಪಿಕೆಯು ಪತ್ರಿ-ಯೊಬ್ಬರ ಮನೆಯಲ್ಲಿ ಕಾಯ್ದಿಟ್ಟುಕೊಳ್ಳುವ ಅಮೌಲ್ಯ ಗ್ರಂಥವಾಗಿದೆ. ಕೃಷಿ ಇಲಾಖೆಗಳು ಮಾಡುವ ಕರ್ತವ್ಯವನ್ನು ನರಗುಂದ ವಿರಕ್ತಮಠಾಧಿಪತಿಗಳಾದ ಪೂಜ್ಯ ಶ್ರೀ ನಿ. ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು ಪ್ರಕಾಶ ಪಡಿಸಿ, ರಾಜ್ಯದ ಕೃಷಿ ಅಧಿಕಾರಿಗಳಿಗೂ, ರೈತ ಸಮೂಹಕ್ಕೂ ಆಧ್ಯಾತ್ಮ ಪಿಪಾಸಿಗಳಿಗೂ ಉಪಕೃತರಾಗಿದ್ದಾರೆ.

**ಸಿ. ಎಸ್. ಪಾಟೀಲ**
ಸಹ ಕೃಷಿ ನಿರ್ದೇಶಕರು,
ಧಾರವಾಡ, ವಿಭಾಗ ಹಾಗೂ ಬೆಳಗಾಂವ.



ಬಿಜಾಪೂರ ಜಿಲ್ಲೆ ಕುಂಟೋಜಿ ಸಜ್ಜನರ ಚೌಕಿಯಲ್ಲಿ ಶ್ರೀ ಘನಮಠೇಶರು 'ಕೃಷಿಜ್ಞಾನ ಪ್ರದೀಪಿಕೆ'

# ಶ್ರೀ ಘನಮಠೇಶ ಧರ್ಮಪ್ರಚಾರಕ ಮಂಡಳಿಯ ಕಾರ್ಯವ್ಯಾಪ್ತಿ.

ಶ್ರೀ ಮ. ನಿ. ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು, ಹಾಳಕೇರಿ ಲಿಂ॥ ಶ್ರೀ ಮ. ನಿ. ಪ್ರ. ಗುರು ಅನ್ನದಾನ ಮಹಾಸ್ವಾಮಿಗಳವರ ಆದೇಶದ ಮೇರೆಗೆ ಸಂತೇಕೆಲೂರಿನ ಸರ್ವಭಕ್ತರ ಅಪೇಕ್ಷೆಯಂತೆ ಶಿವಯೋಗಮಂದಿರದಿಂದ ಶಾಲಿವಾಹನ ಶಕೆ ೧೮೮೭ ವಿಶ್ವಾವಸುನಾಮ ಸಂವತ್ಸರದ ವೈಶಾಖ ಬ॥ ೧೧ ಕ್ಕೆ ಅಂದರೆ ದಿನಾಂಕ ೨೭-೫-೧೯೬೫ ನೆಯ ಗುರುವಾರ ಶುಭ ಮುಹೂರ್ತದಲ್ಲಿ ದಯಮಾಡಿಸಿದರು. ಶ್ರೀ ಘನಮಠೇಶನ ನ್ಯಾಯನಿಷ್ಠುರ, ಕರ್ತೃತ್ವಶಕ್ತಿಯೇ ಮೈವೆತ್ತು ಬಂದಂತೆ ಸದ್ಯದ ನರಗುಂದ ವಿರಕ್ತ ಮಠಾಧ್ಯಕ್ಷರೂ, ಸಂತೆಕೆಲೂರಿನ ಶ್ರೀಘನಮಠೇಶ ಶಿವಯೋಗಾ- ಶ್ರಮ ಸಂಸ್ಥಾಪಕರೂ, ಪ್ರಸ್ತುತ ಧರ್ಮಪ್ರಚಾರ ಮಂಡಳಿಯ ಸಂಸ್ಥಾಪಕರೂ, ಸಂಚಾಲಕರೂ ಆದ ಪೂಜ್ಯ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳೆಂದು ಬೇರೆ ಹೇಳಬೇಕಾಗಿಲ್ಲ.

ಶ್ರೀಗಳು ಸಂತೆಕೆಲೂರಿಗೆ ದಯಮಾಡಿಸಿದಾಗ ಶ್ರೀ ಘನಮಠೇಶನ ಗದ್ದುಗೆಯ ಸ್ಥಾನ ಕಾಡಿನೋಪಾದಿಯಲ್ಲಿದ್ದುದನ್ನು ನಾಡಿನ ಮಹಾಮಠವನ್ನಾಗಿ ಮಾರ್ಪಡಿಸಲು ಕಂಕಣಬದ್ಧರಾಗಿ ನಿಂತ ಧೀರ ಯತಿಗಳು. ಇವರು ರಾಯಚೂರು, ವಿಜಾಪೂರ ಜಿಲ್ಲೆಗಳ ಅನೇಕ ಗ್ರಾಮ-ಪಟ್ಟಣಗಳಲ್ಲಿ ಸಂಚರಿಸಿ ಧರ್ಮಜಾಗೃತಿಯನ್ನು ಶಿವಾನುಭವ ಪ್ರಚಾರವನ್ನು ಮಾಡುತ್ತ ದೈಹಿಕ ಪರಿಶ್ರಮ ವಹಿಸಿ ಹಣವನ್ನು ಸಂಗ್ರಹಿಸಿ ಶಿಲಾ ಮಠವನ್ನು ನಿರ್ಮಿಸಿದ ಸಂಗತಿ ಸರ್ವ ಜನರಿಗೆ ವೇದ್ಯವಿದೆ.

ಕನ್ನಡದಲ್ಲಿ ಕೃಷಿಜ್ಞಾನದ ಬಗ್ಗೆ ಸವಿಸ್ತಾರವಾಗಿ ತಿಳುವಳಿಕೆಯ ಮಾಡಿಕೊಡುವ ಏಕೈಕ ಗ್ರಂಥವಿದೆಂದು ಭಾವಿಸಲಾಗಿದೆ. ಶ್ರೀ ಶಿವಯೋಗಿಗಳ ಭಕ್ತಾಗ್ರಗಣಿಗಳು ನೆರಳಿನಂತೆ ಅವರನ್ನು ಅನುಸರಿಸಿದವರಾದ ಶ್ರೀ ಕುನ್ನಾಳ ಸಿದ್ರಾಮಪ್ಪನವರಿಂದ ದುಂಡಾದ ಅಕ್ಷರಗಳಿಂದ ಗ್ರಂಥಬರೆಯಿಸಿ ಆಗಿನ ಕಾಲದಲ್ಲಿ ಶ್ರೀ ಘನಮಠ ಶಿವಯೋಗಿ ಗಳು ಜನಸಾಮಾನ್ಯ ರೈತರಿಗೆ ಹಂಚುತಿದ್ದರೆಂದು ತಿಳಿದುಬರುತ್ತದೆ. ಮುಂದೆ ಹಸ್ತಲಿಖಿತ ಪ್ರತಿಯಿಂದ ಶ್ರೀ ಪಿ. ಎಂ. ದಾನಯ್ಯನವರು ಮೊದಲನೆಯ ಮುದ್ರಣ ಮಾಡಿದ್ದಾರೆಂದು ನಂತರ ಅದನ್ನೇ ಪರಿಷ್ಕರಿಸಿ ಶ್ರೀ ಲಿ॥ ಘ. ಗು. ಹಳಕಟ್ಟಿಯವರು ಅದರ ಎರಡನೆಯ ಮುದ್ರಣ ಹೊರತಂದರೆಂದು ಗೊತ್ತಾಗುತ್ತದೆ.

ನಮ್ಮ ಮಂಡಳಿಯ ರಕ್ಷಾಕವಚವಾಗಿ ನಿಂತು ಮಾರ್ಗದರ್ಶನ ಮಾಡುತ್ತ ಲಿರುವ ಪೂಜ್ಯ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ದಿನಾಂಕ ೧೧-೧೧-೬೯

ರಂದು ಅವರ ಸಂಶೋಧನೆಗೆ ದೊರೆತ ಮೂಲ ಹಸ್ತಪ್ರತಿಯ ಆಧಾರದಿಂದ ಪ್ರಕಾಶ ಪಡಿಸಿದ್ದರು.

೧೯೮೦ ರಲ್ಲಿ ದ್ವಿತೀಯ ಮುದ್ರಣ ಪ್ರಕಟವಾಯಿತು. ಈಗ ತೃತೀಯ ಮುದ್ರಣಕ್ಕೆ ರಾಜ್ಯದ ಕೃಷಿ ನಿರ್ದೇಶಕರು, ದಕ್ಷ ಆಡಳಿತಗಾರರೂ ಆದ ಸನ್ಮಾನ್ಯ ಶ್ರೀ ವ್ಹಿ. ಸಿ. ಕಟ್ಟಿ, ಬೆಂಗಳೂರು ಅವರು ಕರ್ನಾಟಕ ಕೃಷಿ ಇಲಾಖೆಗಳಿಗೆಲ್ಲ ಖರೀದಿಸಿದ್ದು ನಿಜವಾಗಿಯೂ ಈ ಗ್ರಂಥ ಹೊರಬರಲು ಕಾರಣವಾಯಿತು. ಅಲ್ಲದೇ ಈ ಗ್ರಂಥಕ್ಕೆ ಅಭ್ಯಾಸಪೂರ್ಣ ಮುನ್ನುಡಿ ಬರೆದುದಕ್ಕೆ ಶ್ರೀ ಘನಮಠೇಶರ ಅಂತಃಕರುಣೆವುಂಟಾಗಲೆಂದು ಪ್ರಾರ್ಥಿಸುತ್ತೇವೆ. ಡಾ॥ ಚಂದ್ರಶೇಖರಯ್ಯ ಆಡಳಿತಾ–ಧಿಕಾರಿ, ಆಯಕಟ್ಟು ಅಭಿವೃದ್ಧಿ ಪ್ರಾಧಿಕಾರ ಕಾವೇರಿ ಕಣಿವೆ ಯೋಜನೆ, ಮೈಸೂರು ಹಾಗೂ ಡಾ॥ ಎನ್. ಪಿ. ಪಾಟೀಲ ಕೃಷಿ ಸಂಶೋಧನಾ ನಿರ್ದೇಶಕರು (ನಿವೃತ್ತ) ಕೃಷಿ ವಿಶ್ವವಿದ್ಯಾಲಯ ಮತ್ತು ನಿರ್ದೇಶಕರು ಭಾರತೀಯ ಸಾಮಾಜಿಕ ಆರ್ಥಿಕ ಅಧ್ಯಯನ ಸಂಸ್ಥೆ, ಬೆಂಗಳೂರು. ಶ್ರೀಮಾನ ಸಿ. ಎಸ್. ಪಾಟೀಲ ಸಹಕೃಷಿ ನಿರ್ದೇಶಕರು, ಧಾರವಾಡ ವಿಭಾಗ ಅವರಿಂದ ಗ್ರಂಥದ ಮಹತ್ವ ಕುರಿತು ಸಂದೇಶ ಕಳಿಸಿ-ದ್ದಕ್ಕೆ ಸ್ಮರಿಸದೆ ಇರಲಾರೆವು. ಶಕುಂತಲಾ ಪ್ರಿಂಟರ್ಸ ದ ಒಡೆಯರು ಸಕಾಲದಲ್ಲಿ ಮುದ್ರಿಸಿ ಕೊಟ್ಟಿದ್ದಕ್ಕೆ ಅವರಿಗೂ ಶುಭಾಶಯಗಳನ್ನು ಬಯಸುತ್ತೇವೆ. ಶ್ರೀ ಮಠದ ಭಕ್ತರಾದ ಶ್ರೀಧರ ಹೇಮಣ್ಣವರ ಹಾಗೂ ವ್ಹಿ. ಎಸ್. ಬಾಗೇವಾಡಿ ಬೆಳಗಾಂವ ಈರ್ವರೂ ವೇಳೆಗೆ ಸರಿಯಾಗಿ ಅಚ್ಚುಕೂಟ ಶಬ್ದದೋಷಗಳನ್ನು ನಿವಾರಿಸಿದ್ದಕ್ಕೆ ಶುಭಾಶೀರ್ವಾದಗಳು.

ಪ್ರಕಾಶಕರು,

**ಶ್ರೀ ಘನಮಠೇಶ ಧರ್ಮಪ್ರಚಾರಕ ಮಂಡಳ,**

ಶ್ರೀ ಚೆನ್ನಬಸವೇಶ್ವರ ವಿರಕ್ತಮಠ ನರಗುಂದ.

# ವೈರಾಗ್ಯ ಚಕ್ರವರ್ತಿ
# ಶ್ರೀ ಘನಮಠದ ನಾಗಭೂಷಣ ಶಿವಯೋಗಿಗಳು

–ಶ್ರೀ ನಿ. ಪ್ರ. ಸಂಗನಬಸವ ಸ್ವಾಮಿಗಳು
ಗವಿಮಠ, ನವಿಲುಗುಂದ.

ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ!
ಲೋಕವಿರೋಧಿ, ಶರಣನಾರಿಗಂಜುವನಲ್ಲ!!

–ಕಲ್ಯಾಣದಪ್ಪ.

## ಪ್ರಪಂಚದಿಂದ ಪಾರಮಾರ್ಥದತ್ತ

ಅಪ್ಪನವರ ಮೇಲ್ಕಂಡ ನುಡಿ ಶ್ರೀ ಘನಮಠದ ನಾಗಭೂಷಣ ಶಿವಯೋಗಿಗಳ ಜೀವನಗೀತಕ್ಕೆ ನುಡಿದ ಪಲ್ಲವಿ; ಅವರ ಬಾಳಿನೆತ್ತರಕ್ಕೆ ಹಿಡಿದ ಬಾವುಟ; ಅವರ ಅಗಾಧ ವ್ಯಕ್ತಿತ್ವಕ್ಕೆ ಮುಡಿದ ಕಿರೀಟ. ವಿರೋಧಿ ಸಂವತ್ಸರದಲ್ಲಿ ಹುಟ್ಟಿದುದರಿಂದ ತಾವು ಲೋಕವಿರೋಧಿಗಳಾಗಿದ್ದಿರಬೇಕೆಂದು ಶಿವಯೋಗಿಗಳು ಆಡಿದ್ದುಂಟು. ತೆಲಗು ಕನ್ನಡಕ್ಕೆ ಕೊಟ್ಟ ಕಾಣಿಕೆಯೋ ಪ್ರಪಂಚ ತಾನೆ ಪಾರಮಾರ್ಥಕ್ಕೆ ಕೊಟ್ಟ ಕಾಣಿಕೆಯೋ ಎಂಬಂತಿದ್ದರು ಶಿವಯೋಗಿಗಳು. ಏಳು ಕಡಿಮೆ ನೂರೈವತ್ತು ವರ್ಷದ ಹಿಂದೆ ಅವರು ಲಿಂಗೋದ್ಭವರಾದರು. ಹದಿಮೂರು ಕಡಿಮೆ ನೂರು ವರ್ಷದ ಮುಂಚೆ ಲಿಂಗೈಕ್ಯರಾದರು. ಭಕ್ತರ ನಾಲಿಗೆಯ ಮೇಲೆ 'ಘನಮಠದಪ್ಪ' 'ಘನಮಠದಾರ್ಯ' ನೆಂಬ ನಾಮ ಶಾಶ್ವತವಾಯಿತು.

ತ್ರಿಲಿಂಗದೇಶ, ಆಂಧ್ರಪ್ರದೇಶ, ಅದುವೆ ತೆಲಂಗಾಣನಾಡು, ತೆಲುಗರ ಬೀಡು. ಕಲ್ಯಾಣಕ್ರಾಂತಿಯಾದ ಮೇಲೆ ಚದುರಿದ ಶರಣ – ಶರಣೆಯರದೊಂದು ಗುಂಪು ಶ್ರೀಶೈಲ ಸಾಮ್ರಾಜ್ಯವನ್ನು ಸೇರಿಕೊಂಡಿತು. ಅನುಭವ ಮಂಟಪದ ಕ್ರಾಂತಿ–ಸಾಹಿತ್ಯದ ಸೊಬಗನ್ನು ಆಯಾ ಶರಣ–ಶರಣೆಯರು ತಂತಮ್ಮ ನಾಡಿಗೆ ಕೊಂಡೊಯ್ದರು. ಆಂಧ್ರಮಂಡಲದಲ್ಲಿಯೂ ಬಸವಾದಿ ಪ್ರಮಥರ ವಚನ ವಾಙ್ಮಯದ ಗಂಗೆ ಓತಪ್ರೋತವಾಗಿ ಹರಿದಳು. ಕಾಲಚಕ್ರ ಉರುಳಿದಂತೆ, ತೆಲಂಗಾಣ ನಾಡು ನಿಜಾಮ ಸರಕಾರದ ಆಡಳಿತೆಗೆ ಒಳಪಟ್ಟಿತ್ತು, ಈಗ ಅದುವೆ ಆಂಧ್ರಪ್ರದೇಶವಾಗಿದೆ.

ಆಂಧ್ರಪ್ರದೇಶದಲ್ಲಿ ಅನಂತಪುರ ಜಿಲ್ಲೆಯ ಪಟ್ಟೂರು ತಾಲೂಕಿನ ದೋರವಾಡ ಎಂಬ ಗ್ರಾಮ. ಅಲ್ಲಿ ವೀರಪ್ಪಯ್ಯ ವೀರಮ್ಮ ಎಂಬ ಚೆಂದಾದ, ಒಂದಾದ ಶಿವಭಕ್ತಿ ಸಂಪನ್ನ ಸತಿಪತಿಗಳ ಜೋಡಿ ಇತ್ತು. ಅವರ ಬಾಳ ಪಳ್ಳದಲ್ಲಿ ಭಕ್ತಿಯ ಒರತೆ ಇದ್ದರೂ ಸಂತಾನ ಸಂಪತ್ತಿನ ಕೊರತೆ ಇತ್ತು. ಶಿವಪೂಜಾನಿಷ್ಠೆ ಅವರಲ್ಲಿ ಬಲಗೊಂಡು ಶಿವಕಾರುಣ್ಯ ಜಲ ಚಿಮ್ಮಿ ಬಂದು ಅವರಿಗಿದ್ದ ಕೊರತೆಯನ್ನು ನೀಗಿಸಲು ತಡವಾಗಲಿಲ್ಲ. ಶಾ. ಶ. ೧೭೫೧ (ಕ್ರಿ. ಶ. ೧೮೨೯, ಅಕ್ಟೋಬರ) ವಿರೋಧಿ ಸಂವತ್ಸರ, ಆಶ್ವೀನ ಶುದ್ಧ ೫ ರಂದು ಮಂಗಳವಾರ ವೀರಮ್ಮ ಅರುಣೋದಯದ ಸಮಯದಲ್ಲಿ ಶಿವನ ಕರುಣೋದಯವಾದಂತೆ 'ಗಂಡು' ಕೂಸನ್ನು ಪಡೆದಳು. 'ನಾಗಭೂಷಣ' ನೆಂದು ನಾಮಕರಣವೂ ಆಯಿತು.

ದೋರವಾಡದಲ್ಲಿರುವ ಘನಮಠವೇ ಹಿರಿಯಮಠ. ಬೃಹನ್ಮಠ ಬಾಡ, ಗೋನವಾರ, ಕಿಣಿಗೇರಿಗಳಲ್ಲಿ ಅದರ ಶಾಖಾಮಠಗಳೂ ಇವೆ. ಘನಮಠದ ಸಿದ್ಧಚರಾಧ್ಯಕ್ಷರ ವರದಹಸ್ತದಿಂದ ನಾಗಭೂಷಣಯ್ಯನವರಿಗೆ ಶಿವದೀಕ್ಷೆಯಾಗಿದ್ದಂತೆ. ಆ ಸದ್ಗುರುಗಳ ಮಠದಲ್ಲಿ ಶಿಕ್ಷಣವೂ ಆಗಿದ್ದಿತು. ಅಲ್ಲಿ ಅವರು ತೆಲಗು, ಸಂಸ್ಕೃತ, ಸಂಗೀತಗಳನ್ನು ಕಲಿತರು, ಶಿವಾನುಭವದ ಪರಿಚಯ ಮಾಡಿಕೊಂಡರು. ಅವರ ಓದು ಒಕ್ಕಾಲು, ಬುದ್ಧಿ ಮುಕ್ಕಾಲು. ಮನಸ್ಸಿಲ್ಲದೆ ಮದುವೆಯೂ ಆಯಿತು. ಹೆಂಡತಿ ಸಂಗಮ್ಮನಿಗೆ 'ಗಿರಿಜೆ' ಎಂಬ ಕೂಸಿನ ಜನನವೂ ಆಯಿತು. ಎರಡುಮೂರು ವರ್ಷ ಸಾಂಸಾರಿಕ ಜೀವನ ಕಳೆಯುವುದರೊಳಗೆ ಅದರಲ್ಲಿದ್ದ ಅಸಾರತೆ ಅವರ ಮನಕ್ಕೆ ವೇದ್ಯವಾಯಿತು. ಮನಸ್ಸು ವಿರಕ್ತಿಯ ಕಡೆಗೆ ಒಲಿಯಿತು. ಅವರ ಹೃದಯ ಕುಂಭದಲ್ಲಿ ತುಂಬಿಕೊಂಡಿದ್ದ ವೈರಾಗ್ಯಭಾವನೆ ಹೊರಹೊಮ್ಮಲು ಸಣ್ಣದೊಂದು ಕಾರಣವೇ ಸಾಕಾಯಿತ್ತು. ಸರಿ, ಸದ್ಗುರುವಿನ ಉಪದೇಶ. ಆಜ್ಞೆಗಳನ್ನು ಶಿರಸಾವಹಿಸಿ ದೇಶಸಂಚಾರ ಕೈಕೊಂಡು ಬಿಟ್ಟರು. ಎಳೆ ಹರೆಯದಲ್ಲಿ ಪ್ರಪಂಚಕ್ಕೆ ತಿಲಾಂಜಲಿಯಿತ್ತು, ಪಟ್ಟಣಕ್ಕೆ ಪಂಚರಾತ್ರಿ ಹಳ್ಳಿಗೆ 'ಏಕರಾತ್ರಿ' ಪ್ರವಾಸ ಕೈಕೊಂಡರು. ತೆಲಂಗಣ ಸೀಮೆ ದಾಟಿ ಕನ್ನಡ ನಾಡಿನ ಸೀಮೆಯನ್ನು ಪ್ರವೇಶಿಸಿದರು, ಕಲಾದಗಿ (ವಿಜಾಪುರ ಜಿಲ್ಲೆ) ಇವರ ಪಾದಸ್ಪರ್ಶದಿಂದ ಪುನೀತವಾಯಿತು.

## ಕನ್ನಡಿಗರಾಗಿ ಕರ್ನಾಟಕದಲ್ಲಿ

ತೇಜಸ್ವಿ ನಾಗಭೂಷಣ ದೇಶಿಕರು ಕಲಾದಗಿಯಿಂದ ಕಲಕೇರಿ ಮಾರ್ಗವಾಗಿ ಎಲಗೋಳ ಗ್ರಾಮಕ್ಕೆ ಬಂದರು. ಅಲ್ಲಿ ಹಿರೇಮಠದ ಮಹಾನುಭಾವಿ ರೇವಣಸಿದ್ಧಯ್ಯನವರಲ್ಲಿ ಕೆಲ ಕಾಲ ಕಳೆದಿರಬೇಕು. ಅಲ್ಲಿದ್ದುಕೊಂಡೇ ಕನ್ನಡ ನುಡಿಗಲಿತು ಕನ್ನಡ ಕಾವ್ಯ, ವಚನಶಾಸ್ತ್ರ, ನಿಜಗುಣರ ಶಾಸ್ತ್ರಗಳನ್ನು ವ್ಯಾಸಂಗ ಮಾಡಿರಬೇಕು, 'ಬಸವ ಪುರಾಣ' ಇವರ ಮನವನ್ನು ಸೂರೆಗೊಂಡಿತು. ಬಸವಕೃಪೆ ಇವರಲ್ಲಿ ಕವಿತಾ

ಶಕ್ತಿ ಹುಟ್ಟುವಂತೆ ಮಾಡಿತು. ಅವರ ಪ್ರಸಾದ ವಾಣಿ, ಗುರುಸ್ತುತಿ, ಶಿವಸ್ತುತಿಗಳು ಭಕ್ತಿಪೂರ್ಣವಾಗಿ ಸುಶ್ರಾವ್ಯವಾಗಿ ಹೊರಹೊಮ್ಮಿದವು. ಬಸವ ಸಂದೇಶ ಅವರ ಜೀವನದ ಜೀವಾಳವಾಯಿತು. ಇಡೀ ಕನ್ನಡ ನಾಡನ್ನೆಲ್ಲ ಅವರು ಪಾದಚಾರಿಗಳಾಗಿ ಸುತ್ತಿದಂತೆ ತೋರುತ್ತದೆ. ಜನತೆ ಅವರನ್ನು ಗೌರವದಿಂದ ಕಂಡರು. ಅವರ ಸ್ವಾವಲಂಬನ ಧರ್ಮಾಭಿಮಾನ, ಅಂತಃಶಕ್ತಿ ಮುಂತಾದವುಗಳನ್ನು ಕಂಡು ಮೆಚ್ಚಿ-ದರು. ದಿನವೂ ಐದು ಮನೆಗಳಿಗಿಂತ ಹೆಚ್ಚು ಭಿಕ್ಷೆ ಬೇಡುತ್ತಿರಲಿಲ್ಲ. ಒಮ್ಮೊಮ್ಮೆ ಭಿಕ್ಷೆ ದೊರೆಯದಿದ್ದರೆ, ಒಣ ಧಾನ್ಯವನ್ನೇ ಬಂಡೆಯ ಮೇಲೆ ಅರೆದು ಬಸವಪಾಯಸ ವೆಂದು ಅಷ್ಟರಿಂದಲೇ ಸಂತೃಪ್ತರಾಗುತ್ತಿದ್ದರು. ಸಂಚಾರ ಸಮಯದಲ್ಲಿ ಪುಣ್ಯ ಗಣ್ಯ ಸ್ಥಳಗಳಲ್ಲಿ ತಮಗೆ ತಿಳಿದ ಸ್ಥಳಗಳಲ್ಲಿ ಅವರು ತಪೋನುಷ್ಠಾನಕ್ಕೆ ಕುಳಿತುಕೊಳ್ಳು-ತ್ತಿದ್ದರು. ಬಸವಾದಿ ಪ್ರಮಥರ ತತ್ವಗಳನ್ನು ಸಂದರ್ಭೋಚಿತವಾಗಿ ಘನಮಠಾಧೀಶರ ಮುದ್ರಿಕೆಯಿಟ್ಟು ಆಗಾಗ ಪದ-ಪದ್ಯಗಳನ್ನು ರಚಿಸಿ ಹಾಡಿ ತೋರುವರು. ಸಮಾಜ, ವ್ಯಕ್ತಿಗಳಲ್ಲಿ ತಾವು ಕಂಡ ಲೋಪದೋಷಗಳನ್ನು ನಿರ್ಭಯವಾಗಿ ಖಂಡಿಸುವರು. ಗುರುವಿರಕ್ತರ ಧರ್ಮಾಧಿಕಾರಿಗಳ, ಸಮಾಜದಲ್ಲಿ ಗಣ್ಯರೆಂದೆನಿಸಿಕೊಳ್ಳುವವರನ್ನೂ ನಿರ್ಭಿಢೆಯಿಂದ ಟೀಕಿಸಿ ಅವರನ್ನು ಸರಿದಾರಿಗೆ ತರುವರು. ಇವರು ಯಾವ ಮಠ ಮಾನ್ಯಗಳನ್ನು, ಮೇಣೆ ಪಲ್ಲಕ್ಕಿಗಳನ್ನು ಎಳ್ಳಷ್ಟೂ ಆಶಿಸದೆ, ಹೊನ್ನು ಹೆಣ್ಣು, ಮಣ್ಣುಗಳನ್ನು ಕಣ್ಣೆತ್ತಿ ನೋಡದೇ ಬಸವ ಭಾನುವಿನ ಬೆಳಗಿನಲ್ಲಿ ತೊಳಗಿ ಬೆಳಗಿ-ದವರು.

## ಅಸಾಧಾರಣ ಲೋಕ ಸಂಗ್ರಹ ಕಾರ್ಯಗಳು

ಘನಮಠದಪ್ಪನವರ ದೇಶಪರ್ಯಟನ ಕಾಲದಲ್ಲಿ ಹಲವಾರು ಅಘಟಿತ ಘಟನೆ-ಗಳು ಜರುಗಿದವು. ಅವುಗಳಲ್ಲಿ ಕೆಲವನ್ನು ಸಂಗ್ರಹಿಸಬೇಕೆಂದರೆ– ಘನಮಠದಾ-ರ್ಯರು ಒಮ್ಮೆ ಸೊಲ್ಲಾಪುರಕ್ಕೆ ಬಂದಾಗ ಸಿದ್ಧರಾಮೇಶ್ವರನ ದೇವಸ್ಥಾನದೆದುರಿಗೆ ನಿಂತು ಭಕ್ತಿ ಪರವಶರಾಗಿ ೪೧ ನುಡಿಗಳುಳ್ಳ ಹಾಡನ್ನು ಹಾಡಿ ಮುಗಿಸುವಷ್ಟರಲ್ಲಿ ದೇಗುಲದ ಬಾಗಿಲ ಕೀಲಿ ಕಳಚಿ ಬಾಗಿಲು ತಾನೇ ತಾನಾಗಿ ತೆರೆದು ಸಿದ್ಧರಾಮ ಪ್ರತ್ಯಕ್ಷನಾದ! ಮತ್ತೊಮ್ಮೆ ಅವರು ಚಿಂಚೋಳಿಯಲ್ಲಿದ್ದಾಗ ಬಸವಸ್ತೋತ್ರವನ್ನು ಮಾಡಿ ಪರವಾದಿಗಳನ್ನು ಜಯಿಸಿ ಸರ್ವಧರ್ಮದವರೂ ಬಸವಜಯಜಯಕಾರವನ್ನು ಮಾಡುವಂತೆ ಪ್ರೇರೇಪಿಸಿದರು. ನಿಂಡಗುಂಭದಲ್ಲಿ ಅಲ್ಲಿಯ ಸಿದ್ಧಲಿಂಗಸ್ವಾಮಿ-ಗಳು ಹಾಗೂ ಶಂಷಾಬಾದದ ಚನ್ನಬಸವಸ್ವಾಮಿಗಳು ಇವರೊಡನೆ ಜ್ಞಾನ ಕ್ರಿಯೆಗಳ ಬಗೆಗೆ ಶಿವಾನುಭವ ಗೋಷ್ಠಿ ನಡೆಸಿ ತೊಡಕು ಬಗೆಹರಿಸಿದರು. ಗೊಂಡಬಾಳದ ಸಿದ್ದಯ್ಯನೆಂಬ ಭಕ್ತನ ಮಗ ಬಸವಯ್ಯನಿಗೆ ಕರುಣಿಸಲಾಗಿ ಅವನು ಮುಂದೆ ಮಹಾ ಪಂಡಿತನಾದನು. ಜಾಲಹಳ್ಳಿಯ ವೀರಭದ್ರಶಾಸ್ತ್ರಿಗಳಿಗೆ ೬೩ ಪುರಾತನರ ಪುರಾಣ ಬರೆಯಲು ಹೇಳಿ ಅವರ ಹಿರೇಬೇನೆಯನ್ನು ಕಳೆದರು. ವಿಜಾಪುರದಲ್ಲಿ ಸಿಹಿ ನೀರು

ಸಿಗುವಂತೆ ಮಾಡಿದ್ದು, ಕೃಷ್ಣಾ ನದಿಯನ್ನು ಅಂಬಿಗರ ಸಹಾಯವಿಲ್ಲದೆ ದಾಟಿದ್ದು ಇಂತಹ ಅನೇಕ ಪವಾಡಗಳ ಪಟ್ಟಿಯನ್ನೇ ಅವರ ಜೀವನವಲ್ಲಿ ನೋಡಬಹುದು.

ಒಮ್ಮೆ ಮದಿರೆ ದೇಸಾಯಿ ಘನಮಠದಾರ್ಯರಿಗೆಂದು ತನ್ನ ವಿಳಾಸ ಹಾಕಿಸಿದ ತಂಬಿಗೆಯೊಂದನ್ನು ತಂದು ಕಾಣಿಕೆ ಕೊಡಹೋಗಲು "ದೇಸಾಯಿ, ನಿನ್ನ ತಂಬಿಗೆಯನ್ನು ಹೊರುವುದೇ ನಮಗೆ ಒಜ್ಜೆಯಾಗಿತ್ತು, ಮತ್ತೆ ಮೇಲೆ ನಿನ್ನನ್ನೆಲ್ಲಿ ಹೊತ್ತುಕೊಂಡು ಹೋಗಲಿ" ಎಂದವರೆ ತಂಬಿಗೆಯನ್ನು ತಿರುಗಿ ಕೊಟ್ಟುಬಿಟ್ಟರು. ಇನ್ನೊಬ್ಬ ಭಕ್ತ ಒತ್ತಾಯದಿಂದ ನೀಡಿದ ಬೆಳ್ಳಿಯ ಬಟ್ಟಲುಗಳನ್ನು (ಲೋಟ) ದಾರಿ ಗುಂಟ ಇಡುತ್ತ ಸಾಗಿಬಿಟ್ಟರು! ಸೂಡಿ (ರೋಣ ತಾಲೂಕ) ಗ್ರಾಮದಲ್ಲಿದ್ದಾಗ ಒಲೆಯ ಮೇಲೆ ಕುದಿಯದೇ ಇದ್ದ ಬೇಳೆಗೆ ಸಿಟ್ಟಿನಿಂದ ಅಡಿಗೆಯವನು ಬಯ್ದುದನ್ನು ಕೇಳಿ ಮತ್ತೆ ಬೇರೆ ಅಡುಗೆ ಮಾಡಿಸಿ ಸ್ವೀಕರಿಸಿದರಂತೆ! ಪ್ರಸಾದದ ವಿಷಯದಲ್ಲಿ ಅವರಿಗಷ್ಟು ಗೌರವವಿತ್ತು. ಗೆಜ್ಜಲಗಟ್ಟಿ ಸಂಸ್ಥಾನದ ಅವ್ವನವರು ಒಮ್ಮೆ ದರ್ಶ-ನಾರ್ಥಿಗಳಾಗಿ ಬಂದಾಗ "ಏನವ್ವಾ ಹೊರಗಿನ ಬುರಕಿಯಿಂದಾಗುವದೇನು? ಬುರುಕಿ ಒಳಗಿರಬೇಕು" ಎಂದು ಎಚ್ಚರಿಸಿ ಅವ್ವನವರ ಕಣ್ಣು ತೆರೆಯಿಸಿದರು.

## ಘನ ವ್ಯಕ್ತಿಗಳೊಂದಿಗೆ ಘನಮಠಾರ್ಯರು

ಘನಮಠವಪ್ಪನವರು ತಮ್ಮ ಪಾದಯಾತ್ರೆಯಲ್ಲಿ ಅನೇಕ ಮಹಾವ್ಯಕ್ತಿಗಳನ್ನು ಕಂಡಿದ್ದುಂಟು. ಅವರಿವರಿಂದ ಒಂದೊಂದು ಗುಣವನ್ನು ಕೊಂಡದ್ದುಂಟು. ಒಮ್ಮೊಮ್ಮೆ ಅವರಿವರನ್ನು ಎಚ್ಚರಿಸಿ ದಾರಿಗೆ ತಂದದ್ದು ಉಂಟು. ಹಾಲ್ವಿ ಮಹಾಂತ ಶಿವಯೋಗಿಗಳಿಗೆ ಸಮಾಜ ಪುನುರುತ್ಥಾನಕ್ಕೆ ಕಟ್ಟಡಗಳನ್ನು ನಿರ್ಮಿಸದೆ ಪುರಾಣ ಪ್ರವಚನಾದಿ ಕಾರ್ಯಗಳನ್ನು ನಡೆಸಲು ಪ್ರಾರ್ಥಿಸಿದರು. ನೀರಲಕೇರಿ ಬಸವಲಿಂಗ ಪ್ಪನವರರಿಗೆ ಕಾಮಿನಿಯರಿಂದ ದೂರ ಇರುವಂತೆ ಬಿನ್ನವಿಸಿಕೊಂಡರು. ಬಳ್ಳಾರಿ ಸಕ್ಕರೆ ಕರಡಪ್ಪನವರಲ್ಲಿ ಇಣುಕಿದ್ದ ಮಮಕಾರದ ನಿರಸನ್ ಗೈದರು. ಚಿತ್ರರಗಿ ವಿಜ-ಯಮಹಂತ ಶಿವಯೋಗಿಗಳಿಂದ "ಅಡ್ಡಪಲ್ಲಕ್ಕಿ ಏರಿದುದು ಅದೇ ಮೊದಲು, ಅದೇ ಕಡೆ" ಎಂಬ ವಚನ ಭಿಕ್ಷೆಯನ್ನು ಪಡೆದರು. ಇದಲ್ಲದೆ ಬಳ್ಳಾರಿ ಗಡ್ಡೆ ಶಾಂತವೀರ ಮಹಾಸ್ವಾಮಿಗಳು ಮದ್ದಾನಿಮಠ, ನಿಡಗುಂದಿ ವಿರಕ್ತಮಠದ ಕಾಲಕಾಲೇಶ್ವರ ಸ್ವಾಮಿ ಗಳು, ನಾರದಗಡ್ಡೆ ಚನ್ನಬಸವಸ್ವಾಮಿಗಳು ಚಿಕ್ಕಕೊಡಗಲಿ ಗವಿಮಠವ ಮಹಾಲಿಂಗ ಸ್ವಾಮಿಗಳು, ಮುಂತಾದವರಿಗೆ ಮಾರ್ಗದರ್ಶನ ನೀಡಿದರು.

ಘನಮಠದಾರ್ಯರು ತಮ್ಮ ಸಂಚಾರದಲ್ಲಿ ಕೆಲವು ಕಡೆ ಪುರಾಣ ಹೇಳಿದರು, ಹೇಳಿಸಿದರು. ಮತ್ತು ಪುರಾಣ ಹೇಳುತ್ತಿದ್ದ ಊರಲ್ಲಿ ಕೆಲದಿನ ವಾಸ್ತವ್ಯ ಮಾಡಿ ದರು. ಪುರಾಣ, ಪ್ರವಚನ, ಗಣಾರಾಧನೆಗಳಿಂದ ಧರ್ಮವನ್ನು ಉಳಿಸಿದರು. ನೀತಿಯನ್ನು ತಿಳಿಸಿದರು. ಸಂಸ್ಕೃತಿಯನ್ನು ಬೆಳೆಸಿದರು. ಅವರು ಸಂಗಮ,

ಚಿತ್ತರಗಿ, ಕಲ್ಯಾಣ, ಕುಂಟೋಜಿವಾಡ, ಹಾಲ್ವಿ, ಸಂತೆಕೆಲೂರು, ಚಿಂಚೋಳಿ, ಬೆಂಡೆಬೊಂಬಳಿ ಮುಂತಾದ ಗ್ರಾಮಗಳಲ್ಲಿ ಬಸವ ಪುರಾಣ, ೬೩ ಪುರಾತನರ ಪುರಾಣ, ವೀರಭದ್ರವಿಜಯ ಪುರಾಣ ಮುಂತಾದ ಪುರಾಣಗಳನ್ನು ಹೇಳಿಸಿದರು, ಹೇಳಿದರು. ಆ ಊರುಗಳಲ್ಲೆಲ್ಲ ಅನೇಕ ಪವಾಡಗಳನ್ನು ಮೆರೆದಿದ್ದಾರೆ.

## ಸಂಸ್ಮರಣ; ಸ್ಫೂರ್ತಿ ಕಿರಣ.

ಘನಮಠದಪ್ಪನವರ ಸ್ಮಾರಕಗಳು ನಮ್ಮ ನಾಡಿನಲ್ಲಿ ಹಲವಾರು ಕಡೆಗಳಿವೆ. ಕುಂಟೋಜಿಯಲ್ಲಿ ಅವರ ಚೌಕಿ, ಪಾದುಕೆಗಳು, ೬೩ ಪುರಾತನರ ಮಂಟಪಗಳಿವೆ. ಸಂಗಮ ಕರಿಕಟ್ಟೆ, ಅಂಟರತಾನಿ ಮುಂತಾದೆಡೆ ಅವರ ಕಟ್ಟೆಗಳು ಇವೆ. ವಿಜಾಪುರ ದಲ್ಲಿ ಅಪ್ಪನವರ ಬಾವಿ, ಕೋಡಿಹಾಳ, ಮುದಗಲ್ಲು, ಕಡೂರು, ಹಂಪೆಹೊಳೆ, ಸಂತೆಕೆಲೂರು, ಕಂದಗಲ್ಲು ಮಲ್ಲಾಪುರ (ರೋಣ ತಾಲೂಕ), ಕೋಡಿಕೊಪ್ಪ ಮುಂ-ತಾದ ಸ್ಥಳಗಳಲ್ಲಿ ಬಿಲ್ವವನ, ಪಡಿಹೊಲ, ತೋಟ ಮುಂತಾದವುಗಳಿವೆ.

ಈಗಲೂ ಅವರ ಚಿರನೆನಹಿನಲ್ಲಿ ಸ್ಮಾರಕಗಳಾಗುತ್ತಿವೆ. ಘನಮಠದಪ್ಪನವರ ಸಮಾಧಿಮಂಟಪ, ಶ್ರೀ ಘನಮಠೇಶ ಶಿವಯೋಗಾಶ್ರಮ, ವಾಚನಾಲಯಗಳನ್ನು ಸಂತೆಕೆಲೂರಲ್ಲಿ ಕಾಣಬಹುದು. ಅಪ್ಪನವರ ಪುಣ್ಯತಿಥಿ ಆಚರಣೆ: ಅವರ ಮೇಲೆ ಗ್ರಂಥ ರಚನೆ, ಈಗಲೂ ನಡೆದಿವೆ, ನಡೆಯುತ್ತಿವೆ.

## ನಿತ್ಯ ಸಾಹಿತ್ಯ ನಿರ್ಮಾಣ

ಭಕ್ತಜನ ಬದುಕಲೆಂದು ಘನಮಠದಾರ್ಯರು ಅಮೌಲ್ಯವಾದ ಭಕ್ತಿ ಪ್ರಧಾನ-ವಾದ ಕೈವಲ್ಯ ಸಾಹಿತ್ಯ ಸುಧಾಪಾತ್ರೆಯನ್ನು ಕೈಗಿತ್ತು ಹೋಗಿದ್ದಾರೆ. ತಮ್ಮ ಹಾಡುಗಬ್ಬದ ಮುಖಾಂತರ ಶಿವಭಕ್ತಿ, ಶಿವಾಚಾರಗಳ ಹುಲುಸಾದ ಬೆಳೆ ಬೆಳೆದು ಶಿವಾನುಭವದ ಫಲವನ್ನು ಇಟ್ಟುಹೋಗಿದ್ದಾರೆ. ಅವರ ಭಾವಗೀತೆಗಳು, ಭಕ್ತಿ ಶರಣ ಸ್ತುತಿ ವಿಚಾರಕ್ಕೆ ಮೀಸಲಾಗಿವೆ. ಸಂಗೀತದ ಸಹಚರ್ಯದಿಂದ ಕೂಡಿವೆ. ಹರ್ಡೇಕರ ಮಂಜಪ್ಪನವರು 'ಭಕ್ತಿ ಸುಧಾಸಾರ' ಎಂಬ ಹೆಸರಿನಲ್ಲಿ ಇವನ್ನು ಪ್ರಕಟಿ-ಸಿದ್ದಾರೆ. ಸಮಾಜ ವಿಮರ್ಶೆಯೂ ಅವುಗಳಲ್ಲಿ ಒಂದುಗೂಡಿದೆ. ಅವರ ತತ್ವ ಪದಗಳು ಅವರ ಅಂತರಂಗ ಜೀವನದ ಗತಿಬಿಂಬವಾಗಿವೆ. ವಚನಶಾಸ್ತ್ರದ ಅನುಭವಾ-ಮೃತ ಅವುಗಳಲ್ಲಿದೆ. ಅಧರ್ಮ ಅನೀತಿಗಳ ಖಂಡನೆ, ಹಿತಮಿತ ಉಪದೇಶ, ಬಸವನಲ್ಲಿದ್ದ ಅಪಾರಶ್ರದ್ಧೆ ಅವರ ಪದಗಳಲ್ಲಿ ಎದ್ದು ತೋರುತ್ತವೆ. 'ಗುರುಕರಜಾತರು ನಮ್ಮವರು' ಎಂಬ ಹಾಡಿನಲ್ಲಿ ಶರಣರ ಸತ್ಯ ಶುದ್ಧ ಆಚರಣೆಯನ್ನು ಚಿತ್ರಿಸಿದ್ದಾರೆ. ಗುರು ವಿರಕ್ತರಿಬ್ಬರನ್ನೂ ಕೊಂಡಾಡಿ ಸಾಮರಸ್ಯವನ್ನು ಮೆರೆದಿದ್ದಾರೆ. ಸಾಮಾನ್ಯ-

ರಿಗೂ ಅರ್ಥವಾಗುವ ರೀತಿಯಲ್ಲಿ, ಸರಳ ಭಾಷೆಯಲ್ಲಿ ನೀತಿಬೋಧೆಯನ್ನು ಸ್ಪಷ್ಟ ಶೈಲಿಯಲ್ಲಿ ಮಾಡಿ ಕೃತಕೃತ್ಯರಾಗಿದ್ದಾರೆ. ಅವರ ಸಾಹಿತ್ಯವನ್ನು ಅರಗಿಸಿಕೊಂಡರೆ ನಮ್ಮ ಜನರ ಬಾಳು ಬಂಗಾರವಾದೀತು! ಸಿದ್ಧಿಯಿಂದ ಸಿಂಗಾರವಾದೀತು!! ಅಮರತ್ವದಿಂದ ಅಂಗಾರವಾದೀತು!!!

ಘನಮಠದಾರ್ಯರು ಕೃಷಿ ಜಗತ್ತಿಗೊಂದು ಅತ್ಯಂತ ಮಹತ್ವದ ಕೊಡುಗೆಯೊಂದನ್ನು ಕರುಣಿಸಿದ್ದಾರೆ. ಅವರ ಕೃಷಿಶಾಸ್ತ್ರ ಪರಿಜ್ಞಾನ ಅಗಾಧವಾದುದು. ಅನೇಕ ಕಡೆ ತಾವೇ ಸ್ವತಃ ಕೃಷಿ ಮಾಡಿಸಿದ್ದಾರೆ. ಈ ಕ್ಷೇತ್ರದಲ್ಲಿ ತಮ್ಮ ಜ್ಞಾನಾನುಭವಗಳನ್ನು 'ಕೃಷಿಜ್ಞಾನ ಪ್ರದೀಪಿಕೆ' ಎಂಬ ಬೃಹದ್ಗ್ರಂಥ ರೂಪದಲ್ಲಿ ಬೆಳಗಿಸಿದ್ದಾರೆ. ನೇಗಿಲಯೋಗಿಗಳಿಗೆ ಶಿವಯೋಗಿಗಳೊಬ್ಬರು ಲೋಕ ಕಲ್ಯಾಣ ದೃಷ್ಟಿಯಿಂದ ನೀಡಿದ ಅಪೂರ್ವ ಕಾಣಿಕೆಯಿದು. ಇದರ ದ್ವಿತೀಯ ಆವೃತ್ತಿ ಇದೀಗ ಪ್ರಕಟಗೊಂಡಿದೆ ಅದರ ಸದುಪಯೋಗ ಸರ್ವರಿಗೂ ಆಗಲಿ !

## ಪ್ರಚಾರ ಪ್ರಭೆಯ ಪ್ರಸಾರಕರಾರು?

ಘನಮಠದಾರ್ಯರ ಅನುಪಮ ವ್ಯಕ್ತಿತ್ವ, ಅಮರ ಸಾಹಿತ್ಯಗಳನ್ನು ಇತ್ತೀಚೆ ಜನತೆಯ ಮುಂದಿಟ್ಟು ಅವುಗಳ ಪ್ರಕಾಶನಕ್ಕೆ ಕಾರಣೀಭೂತರಾದವರೆಂದರೆ ಶ್ರೀಘನ ಮಠೇಶ ಶಿವಯೋಗಾಶ್ರಮ ಸಂಸ್ಥಾಪಕರೂ ನರಗುಂದದ ವಿರಕ್ತ ಮಠಾಧಿಪತಿಗಳೂ ಆದ ಶ್ರೀ ನಿ. ಪ್ರ. ಮಲ್ಲಿಕಾರ್ಜುನ ದೇಶಿಕೇಂದ್ರ ಮಹಾಸ್ವಾಮಿಗಳು ಹಾಲಕೆರೆಯ ಶ್ರೀ ನಿ. ಪ್ರ. ಅನ್ನದಾನ ಮಹಾಸ್ವಾಮಿಗಳವರ ಅನುಜ್ಞೆಯ ಮೇರೆಗೆ ಸಂತೆಕೆಲ್ಲೂರಿನಲ್ಲಿ ನಿಂತು ಘನಮಠದಾರ್ಯರ ಪುಣ್ಯಾಶ್ರಮವನ್ನು ನೆಲೆಗೊಳಿಸಿ ನಿತ್ಯದಾಸೋಹವನ್ನು ಪ್ರಾರಂಭಿಸಿದರು. ಪುರಾಣ, ಪ್ರವಚನ, ಭಜನೆ–ಕೀರ್ತನೆ; ಭಾಷಣಗಳಿಂದ ಜನ ಜಾಗೃತಿಗೊಳಿಸಿ, ಅಪ್ಪನವರ ಸಮಾಧಿ ಮಂಟಪ, ವಿಶಾಲ ಪಟಾಂಗಣ. ಅನುಭವ ಮಂಟಪ, ಉಗ್ರಾಣ, ಪೂಜಾ ಮಂದಿರ, ತೀರ್ಥ (ಭಾವಿ) ಮುಂತಾದವುಗಳು ತಲೆಯೆತ್ತಿ ನಿಂತಿವೆ. ಶ್ರೀಗಳು ಶ್ರೀ ಘನ ಮಠ ಶಿವಯೋಗಾಶ್ರಮ ಗ್ರಂಥಮಾಲೆಯನ್ನು ಸ್ಥಾಪಿಸಿ ೧) ಶ್ರೀ ಘನಮಠದಾರ್ಯರ ಪುರಾಣ (ದ್ವಿತೀಯಾವೃತ್ತಿ) ೨) ಕೃಷಿ ಜ್ಞಾನ ಪ್ರದೀಪಿಕೆ (ದ್ವಿತೀಯಾವೃತ್ತಿ) ೩) ಶ್ರೀ ಘನಮಠೇಶ್ವರ ನಾಮಾವಳಿ ೪) ನೇಗಿಲ ಯೋಗಿ ೫) ಘನಮಠೇಶ ತತ್ವಪದಗಳು ೬) ಶ್ರೀ ನೀರಲಕೇರಿ ಬಸವಲಿಂಗ ಶರಣರು ೭) ಶ್ರೀ ಕಡಿವಾಲ ಶ್ರೀಕಾಂತೇಶ್ವರ ಚರಿತ್ರೆ ೮) ನೇಗಿಲ ಜೋಗಿ ೯) ಒಕ್ಕಲುತನದ ಲಾವಣಿ ಪದ ೧೦) ಶ್ರೀ ಘನಮಠೇಶನ ಸಂಕ್ಷಿಪ್ತ ಚರಿತ್ರೆ ಹೀಗೆ ಮುಂತಾದ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಶ್ರೀಗಳವರು ಘನಮಠದಪ್ಪನಲ್ಲಿ ಅಸಾಧಾರಣ ಭಕ್ತಿ–ವಿಶ್ವಾಸಗಳನ್ನಿರಿಸಿ ಕೊಂಡವರು. ಪ್ರವಚನ ಪಟುಗಳೂ, ಧರ್ಮಾಭಿಮಾನಿಗಳೂ, ಕರ್ತೃತ್ವಶಾಲಿಗಳೂ, ಆಚಾರನಿಷ್ಠರೂ ಆದ ಅವರು ಹೋದಲ್ಲೆಲ್ಲ ಘನಮಠದಾರ್ಯರ ಘನಮಹಿಮೆಯ ಪರಿಚಯ ಮಾಡಿಕೊಟ್ಟು

ಜನತೆ ಅಪ್ಪನವರಲ್ಲಿ ಭಕ್ತಿಯುತರಾಗುವಂತೆ ಪ್ರೇರೆಪಿಸುವಲ್ಲಿ ಕಂಕಣಬದ್ಧರಾಗಿದ್ದಾರೆ. ಪ್ರತಿ ವರ್ಷ ಅಪ್ಪನವರ ಪುಣ್ಯತಿಥಿಯನ್ನು ವಿಜೃಂಭಣೆಯಿಂದ ನೆರವೇರಿಸುವ ಪರಿಪಾಠ ಹಾಕಿದ್ದಾರೆ. ಏಕೆಂದರೆ ಘನಮಠದಪ್ಪನವರು ಸಂವತ್ಸರ ಪುಷ್ಯ ಶುದ್ಧ ೪ ಬುಧವಾರ ಲಿಂಗೈಕ್ಯರಾದ ಶ್ರೀ ಪುಣ್ಯದಿನವದು. ನರಗುಂದದ ಜನಮನದಲ್ಲಿ ಘನ ಮಠದಾರ್ಯರನ್ನು ನಿಲ್ಲುವಂತೆ ಮಾಡಿದ ಶ್ರೇಯಸ್ಸು ಶ್ರೀಗಳವರಿಗೆ ಸಲ್ಲುತ್ತದೆ. ಅವರಿಂದ ಲೋಕ ಸಂಗ್ರಹಕಾರ್ಯಗಳು ಇನ್ನೂ ಅವ್ಯಾಹತವಾಗಿ ನಡೆಯಲಿ! ಇಂದು ಅವರು ನರಗುಂದ ವಿರಕ್ತಮಠಕ್ಕೆ ಅಧಿಪತಿಗಳಾಗಿರುವದು ಅತ್ಯಂತ ಹೆಮ್ಮೆಯ ಹಾಗೂ ಸಂತಸದ ಸಂಗತಿ.

## ಸಂದೇಶ

ಘನಮಠದಾರ್ಯರು ನೀಡಿದ ಸಂದೇಶದ ಸಾರಾಂಶವೆಂದರೆ- ೧) ಅನ್ಯದೇವರು ಗಳಿಗೆ ಶಿರಬಾಗಬೇಡಿ ೨) ಆ ದೇವರುಗಳ ಹೆಸರು ಕೂಡ ಮಕ್ಕಳಿಗೆ, ದನಕರುಗಳಿಗೆ ಇಡಬೇಡಿ ೩) ಜಂಗಮರಿಗಲ್ಲದೆ ಅನ್ಯರಿಗೆ ನೀಡಬೇಡಿ ೪) ಶಿವನ, ಶಿವಶರಣರನ್ನು ಹೊರತಾಗಿ ಅನ್ಯರನ್ನು ನೆನೆಯಬಾರದು ೫) ಗುರುವಿರಕ್ತರಲ್ಲಿ ಭೇದಭಾವವೆನಿಸಬಾರದು ೬) ಪಂಕ್ತಿಭೇದಕ್ಕೆ ಎಡೆಗೊಡಬಾರದು ೭) ಅನಾಚಾರಿಗಳ ಬಳಿ ಸುಳಿಯಬಾರದು ೮) ಢಾಂಬಿಕರನ್ನು ನಂಬಬೇಡಿ ಬಸವನ ತ್ವತ್ವವನ್ನು ಜೀವನದಲ್ಲಿ ಅಳವಡಿಸಿಕೊಳ್ಳಿ ೯) ಬಸವ ನಾಮುವನ್ನುಸದಾ ಸ್ಮರಿಸಿ. ಇಂತಹ ಹಲವಾರು ಅಮೌಲ್ಯ ಸಂದೇಶಾತ್ಮಕ ಬೋಧನೆಯನ್ನು ಘನಮಠದಪ್ಪನವರು ನೀಡಿದರು. ಅಷ್ಟೆ ಅಲ್ಲ ತಾವು ಸ್ವತಃ ಹಾಗೆ ಅಕ್ಷರಶಃ ನಡೆದರು. ನಡೆದು ನುಡಿದವರು ಅವರು ಉಪದೇಶಿಸಿದ ಸನ್ಮಾರ್ಗದಲ್ಲಿ ನಡೆದು ನಾವು ಪುನೀತರಾಗೋಣ.



# ಅನುಕ್ರಮಣಿಕೆ

## ೨ ನೇ ಭಾಗ

## ಪಾರಮಾರ್ಥ ಕೃಷಿ

# ಈ ಗ್ರಂಥದಲ್ಲಿಯ ಚಿತ್ರಗಳು.



ಕೃಷಿಜ್ಞಾನ ಪ್ರದೀಪಿಕೆ ಬರೆದ ಶ್ರೀ ಘನಮಠ ಶಿವಯೋಗಿಗಳವರ
ಸಮಾಧಿಯ ಮೇಲೆ ಶಿಲಾಮಂಟಪ ಕಟ್ಟಿಸುವ ಕಾಲಕ್ಕೆ
ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ನಿಂತ ದೃಶ್ಯ ೧೯೬೬.

ಶ್ರೀ ಗುರು ಬಸವ ಲಿಂಗಾಯನಮಃ

# ಕೃಷಿಜ್ಞಾನ ಪ್ರದೀಪಿಕೆ.

## ಪೀಠಿಕೆ.

ಉ. ವೃ. ಶ್ರೀ ಗುರು ದೇವನಾಜ್ಞೆಯೊಳಗೀಗ ಶೃತಿ ಸ್ಮೃತಿ ಸತ್ಪುರಾಣ ಶಾ।
ಸ್ತ್ರಾಗಮ ನೀತಿ ಯಾದ್ಯರ ಮತೋಕ್ತಿ ಸುಸಮ್ಮತವಾಗಿ ಯಾಗಲಿ।
ಲೋಗರ ಭೋಗ ಮೋಕ್ಷಕರ ಮಾಗಿ ಸಮಸ್ತ ಪದಾರ್ಥಜ್ಞಾನದು।
ದ್ಯೋಗ ಚಮತ್ಕೃತಾರ್ಥಸುವಿವೇಕದಿ ಸೇರಿಸದೇಂ ಕೃಷಿಕ್ರಮಂ ॥೧॥

ಶ್ರೀ ಮಚ್ಚಿದ್ಘನಮಠನಿವಾಸ ಶ್ರೀ ನಾಗಭೂಷಣ ಮಹಾ ಪ್ರಭುಗಳ ಆಜ್ಞಾನುಸಾರವಾಗಿ ಶೃತಿ ಸ್ಮೃತಿ ಸತ್ಪುರಾಣ ಶಾಸ್ತ್ರಾಗಮಂಗಳ ನೀತಿ ಯಿಂದಲೂ ಪೂರ್ವ ಪುರಾತನ. ಬಸವಾದಿ ಪುರಾತನ, ನೂತನ ಪುರಾತನ ರೆನಿಪ ಪರಮಾರಾಧ್ಯರ ಮತೋಕ್ತಿಯ ವಚನ ಸಮ್ಮತದಿಂದಲೂ ಈ ಲೋಕದ ಸಮಸ್ತ ಸಜ್ಜನ ಸದ್ಭಕ್ತರುಗಳೆಲ್ಲರ ಭೋಗ ಮೋಕ್ಷಕರವಾಗಿ ಈ ಭೂಮಿ ಯಿಂದುದಯಿಸುವ ಸಮಸ್ತ ಧಾನ್ಯಾದಿ ಫಲ ಪದಾರ್ಥಂಗಳನ್ನು ಬಿತ್ತಿ ಬೆಳೆ ದುಂಬುವ ಜ್ಞಾನವನ್ನು ಷಟ್ಕೃಷಿ ವ್ಯಾಪಾರದುದ್ಯೋಗದ ಚಮತ್ಕೃತಿಗಳನ್ನು ಮೋಕ್ಷಜ್ಞಾನೋತ್ಕರ್ಷವಾಗಲೋಸ್ಕರವಾಗಿ ಶ್ರೀ ಗುರುದೇವನ ಪ್ರಸಾದ ವಾಕ್ಯದಾಧಾರದಿಂದ ಸಮಸ್ತರಿಗೂ ತಿಳಿಯುವ ಹಾಗೆ ದೇಶ ಭಾಷೆಯಾದ ತಿಳಿಗನ್ನಡ ವಾಕ್ಯರೂಪದಿಂದ ಮತ್ತು ಕೆಲವು ಕೆಲವು ವ್ಯಂಗಿ ಉಕ್ತಿಗಳಿಂದಾ ದರೂ ತಿಳಿಯುವ ಹಾಗೆ ಬರೆದಿದೆ

ಈ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥವು ಇಪ್ಪತ್ತೈದು ಪ್ರಕರಣಂಗಳು ಳ್ಳದ್ದಾಗಿ ಪೂರ್ವೋತ್ತರವೆಂಬ ಎರಡು ಭಾಗವಾಗಿರುವದು. ಪ್ರಥಮದ ಪೂರ್ವ ಭಾಗವು ಪ್ರವೃತ್ತಿ ಮಾರ್ಗವಾಗಿ ಲೌಕಿಕಾಚಾರದ ಸಮಸ್ತ ಸದುಕ್ತಿ ಸುನೀ ತಿಗಳಿಂದ ಯುಕ್ತವಾಗಿರ್ದು ಅದರಲ್ಲಿ ಎರಡು ವಿಧವಾಗಿದೆ. ಹೇಗೆಂದರೆ ಮೊದಲನೆಯ ವಿಧದ ಎಂಟು ಪ್ರಕರಣಗಳ ವರೆಗೂ ಜಿರಾಯತ ಸಂಬಂಧವಾಗಿ ಬೈಲು ಹೊಲಗಳ ವ್ಯವಸಾಯವನ್ನು ಮಾಡಿ ಸಕಲ ಧಾನ್ಯಾದಿಗಳನ್ನು ಸಮೃದ್ಧಿ ಯಾಗಿ ಪಡೆಯತಕ್ಕಂಥ ಸುಲಭೋಪಾಯದ ಸಮಸ್ತ ಯುಕ್ತಿಗಳನ್ನು ವ್ಯಕ್ತ ವಾಗಿ ತಿಳಿಯಪಡಿಸಿದ್ದೇನೆ. ಮತ್ತು ಒಂಬತ್ತನೆಯ ಪ್ರಕರಣದಿಂದ ಪ್ರಾರಂ ಭಿಸಿ ಎರಡನೆಯ ವಿಧದ ಬಾಗಾಯತ ಸಂಬಂಧವಾಗಿ ತೋಟದ ಸಕಲ ವ್ಯವ

ಸಾಯದಿಂದ ಬಹು ತರದ ಫಲ ಪದಾರ್ಥಗಳನ್ನು ಬಿತ್ತಿ ಬೆಳೆ ಮಾಡಿಕೊಳ್ಳ ತಕ್ಕಂಥ ಸುಲಭವಾದ ಉಪಾಯಗಳಿಂದ ಸಕಲೈಶ್ವರ್ಯ ಸಂಪದ್ವೃದ್ಧಿಯಾಗುವ ಹಾಗೆ ಅತಿ ಹಿತವಾದ ದಿವ್ಯ ಯುಕ್ತಿಗಳನ್ನು ಬಹುತರದ ಪುಣ್ಯ ಕಾರ್ಯಗಳ ನೀತಿಗಳನ್ನು ಶಾಸ್ತ್ರ ದೃಷ್ಟಾಂತಗಳಿಂದ ಕೆಲವು ಇತಿಹಾಸಗಳಿಂದ ಕೆಲವು ಗಾದೆಯ ಪ್ರಸಂಗ ದೃಷ್ಟಾಂತಗಳಿಂದ ಲೋಕಹಿತೋಪಕಾರಾರ್ಥವಾಗಿ ಇವರಲ್ಲಿ ಬರೆದಿದೆ.

ಇಪ್ಪತ್ತೈದನೆಯ ಪ್ರಕರಣದಲ್ಲಿ ಪರೋಪಕಾರ ಧರ್ಮನೀತಿ ಎನಿಪ ಪುಣ್ಯದ ಬೆಳೆಯನ್ನು ಮಾಡಿಕೊಳ್ಳುವ ಸಕಲ ನೀತಿಯನ್ನು ಹೇಳಿದೆ. ಇದಲ್ಲದೆ ಎರಡನೆಯ ಉತ್ತರ ಭಾಗದಲ್ಲಿ ನಿಜ ಮೋಕ್ಷಪ್ರದವಾದ ಪಾರಮಾರ್ಥ ಕೃಷಿಯ ಪಂಚ ಪ್ರಕರಣಗಳಲ್ಲಿ ಜ್ಞಾನಪ್ರತಿಪಾದನೆಯನ್ನು ಹೇಳಿದೆ. ಈ ಗ್ರಂಥದ ಮೊದಲಲ್ಲಿ ಲೋಕೋಪಕಾರವಾಗಿ ಭೋಗ ಭುಕ್ತಿಪ್ರದವಾದ ಕೃಷಿಯ ಕೆಲಸದ ಸಕಲ ಯುಕ್ತಿಗಳನ್ನು ಮತ್ತು ಆ ಕೃಷಿಯ ಸಂಬಂಧವಾದ ಸಮಸ್ತ ಸುನೀತಿಗಳನ್ನು ಹೇಳಿ ತರುವಾಯದಲ್ಲಿ ಮೋಕ್ಷಪ್ರದವಾದ ಜ್ಞಾನ ವಿಷಯವನ್ನು ಆದ್ಯರ ವಚನ ದೃಷ್ಟಾಂತಗಳಿಂದ ಹೇಳಿದೆ.

ಮತ್ತು ಮನೆಯ ಕೋಣೆಯಲ್ಲಿರುವ ಸಕಲ ಪದಾರ್ಥಗಳನ್ನು ವ್ಯಕ್ತವಾಗಿ ಗೋಚರಿಸಿಕೊಡಬೇಕಾದರೆ ದೀವಿಗೆಯು ಹೇಗೆ ಕಾಣಿಸಿಕೊಡುವದೋ ಹಾಗೆ ಭೋಗ ಮೋಕ್ಷಂಗಳೆರಡು ವಿಧವಾದ ಪ್ರಯೋಜನಕ್ಕೆ ಬೇಕಾಗಿರುವ ಸರ್ವ ಸಾಧನವಾದ ಸಮಸ್ತ ಸುಲಭೋಪಾಯದ ಯುಕ್ತಿಗಳನ್ನು ಸನ್ಮಾರ್ಗವಿವೇಕದ ಸಕಲ ಸುನೀತಿಗಳನ್ನು ಜ್ಞಾನಪ್ರಕಾಶರೂಪದಿಂದ ಪ್ರಜ್ವಲ ತೇಜವನುಳ್ಳ ನಿರ್ಮಲ ದೀವಿಗೆಯಂತೆ ಗೋಚರಿಸಿ ಕೊಡುವದಾದ ಕಾರಣ ಈ ಪುಣ್ಯ ಗ್ರಂಥಕ್ಕೆ ಕೃಷಿಜ್ಞಾನ ಪ್ರದೀಪಿಕೆ ಎಂಬ ನಾಮವು ಸಾರ್ಥಕವಾಗಿದೆ.

## ಗ್ರಂಥಾತಿಶಯವು.

ಶ್ರೀಗುರುದೇವನಾಜ್ಞಾನುಸಾರದಿಂ ನಿರ್ಮಿಸಲ್ಪಟ್ಟ ಲೋಕಹಿತವಾದ ಈ ಕೃಷಿಜ್ಞಾನ ಪ್ರದೀಪಿಕೆ ಎಂಬ ಈ ಗ್ರಂಥವನ್ನು ಓದುವಂಥ ಸಮಸ್ತ ವಿದ್ವಾಂಸರುಗಳಿಗೆ ವಿನಯಪೂರ್ವಕವಾಗಿ ಮಾಡುವ ವಿಜ್ಞಾಪನೆ ಏನೆಂದರೆ ಪ್ರಾಜ್ಞರಾದವರು ಈ ಗ್ರಂಥವನ್ನು ನೋಡಿ ಬಾಹುಲ್ಯವದೆ ಎಂದು ಬೇಸರ ಪಡಬಾರದು. ಬೇಸರವೆಂಬುದು ಆಲಸ್ಯದ ಮನೆಯು, ಆಲಸಿಕೆಯು ದಾರಿದ್ರ್ಯದ ಬೀಜವು.

ಮೊದಲಲ್ಲಿ ತಪಸ್ಸುಗಳಿಗೆ ಬೇಸತ್ತರೆ ಸಕಲ ಸಿದ್ಧಿಗಳನ್ನು ಪಡೆಯುವದೆಂತು ? ಶಾಸ್ತ್ರಾಭ್ಯಾಸಕ್ಕೆ ಗ್ರಂಥ ಬಾಹುಲ್ಯವದೆ ಎಂದು ಅಂಜಿ ಪಾಠಕರು ಬೇಸತ್ತರೆ ಪಂಡಿತರಾಗುವ ಪರಿ ಎಂತು ? ದೇಹದಂಡನೆ ಇಂದ್ರಿಯ ನಿಗ್ರಹಕ್ಕೂ ಬೇಸತ್ತರೆ ತಪಸ್ಸಿದ್ಧಿಯಾಗುವದೆಂತು ? ಕೃಷಿ ಮೊದಲಾದ ಸಕಲ ವ್ಯಾಪಾರಂಗಳಿಗೆ ಬೇಸತ್ತರೆ ಸಂಸಾರಿಗಳು ಸುಖ ಪಡೆಯುವದೆಂತು ? ಸತ್ಕರ್ಮಗಳಿಗೆ ಬೇಸತ್ತರೆ ಪುಣ್ಯ ಸಂಪಾದನವಾಗುವದೆಂತು ? ಸಜ್ಜನ ಸತ್ಪುರುಷರ ದರ್ಶನ ಮುಖಾಂತರವಾಗಿ ಜ್ಞಾನಶಾಸ್ತ್ರ ಪ್ರಸಂಗವ ಕೇಳುವದರಲ್ಲಿ ಬೇಸತ್ತರೆ ಸುಜ್ಞಾನಿಯಾಗುವದೆಂತು ? ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಲನ ಮಾಡುವಲ್ಲಿ ಬೇಸತ್ತರೆ ಭೂಪತಿಗಳಾಗುವದೆಂತು ? ಮತ್ತು ಭೂಪಾಲರುಗಳು ಸಕಲ ಜನಹಿತೋಪಕಾರ ಮಹತ್ಕಾರ್ಯಗಳಾದ ಲೇಖ ಪತ್ರ ನ್ಯಾಯಾಧಿಪತ್ಯ ಧರ್ಮಾಧರ್ಮ ವಿಚಾರ ಮುಂತಾದ ಸಕಲ ಕಾರ್ಯಗಳ ಧೋರಣೆಯನರಿದು ಆಯಾಯ ಕೆಲಸದ ತಾರತಮ್ಯದಂತೆ ಕೋರ್ಟ ತಾಲೂಕ ಜಿಲ್ಹಾ ಇಲಾಖೆ ಮೊದಲಾದ ಕಚೇರಿಗಳಿಗೆ ಉಪಯೋಗವಾದ ನ್ಯಾಯಶಾಸ್ತ್ರ ಧರ್ಮಶಾಸ್ತ್ರಂಗಳಿಗನುಸಾರವಾಗಿ ಕಾನೂನಗಳ ರಚಿಸಿ ಬಡವರಾದ ರೈತ ಜನರನ್ನು ರಕ್ಷಿಸುವಲ್ಲಿ ಬೇಸತ್ತರೆ ರಾಜ್ಯದ ಅಭಿವೃದ್ಧಿಯನ್ನು ಸಂಪತ್ತು ಸತ್ಕೀರ್ತಿಯನ್ನು ಹೊಂದುವದೆಂತು ? ಮತ್ತು ಸೂಪಶಾಸ್ತ್ರ ಕ್ರಮದಂತೆ ಸಕಲ ವಿಚಿತ್ರತರವಾದ ಪಾಕ ಪ್ರಯತ್ನಂಗಳ ಮಾಡುವಲ್ಲಿ ಬೇಸತ್ತರೆ ರಸ ರಸಾಯನಯುಕ್ತವಾದ ಮೃಷ್ಟಾನ್ನ ಭೋಜನ ಸೌಖ್ಯವನ್ನು ಪಯಡೆುವ ಪರಿ ಎಂತು ? ಸಕಲ ಸಿದ್ಧಿಪ್ರದವಾದ ಮಂತ್ರ ಶಾಸ್ತ್ರಂಗಳನ್ನು ತಿಳಿದು ಕ್ರಮಯುಕ್ತವಾಗಿ ಜಪಿಸುವದಕ್ಕೆ ಬೇಸತ್ತರೆ ಸರ್ವ ಸಿದ್ಧಿಗಳ ಪಡೆಯುವದೆಂತು ? ಮತ್ತು ವಿಚಿತ್ರತರವಾದ ಸಕಲ ಯಂತ್ರ ಕಾರಖಾನೆಗಳನ್ನು ಮಾಡುವದಕ್ಕೆ ಬೇಸತ್ತರೆ ಚಾತುರ್ಯ ಪದಾರ್ಥಗಳ ಕಾಣುವದೆಂತು ? ಈ ರೀತಿಯ ಸಕಲ ಕಾರ್ಯಂಗಳಲ್ಲಿ ಅಲಸತ್ವದಿಂದ ಬೇಸರಗೊಂಡು, ಮಾಡಿದರೆ ಬಂದೀತು, ನೋಡಿದರೆ ಬಂದೀತು, ಓದಿದರೆ ಬಂದೀತು, ಕೇಳಿದರೆ ಬಂದೀತು, ಹೇಳಿದರೆ ಬಂದೀತು, ತಿಳಿದರೆ ಬಂದೀತೆಂದು ತಾತ್ಸಾರದಿಂದ ಮಾಡದೆ ನೋಡದೆ ಹೇಳದೆ ಕೇಳದೆ ಓದದೆ ತಿಳಿಯದೆ ಹೋದರೆ, ಯಾವ ಕಾರ್ಯವಾದರೂ ಫಲಿಸುವದಿಲ್ಲವು. ಅದು ಕಾರಣ ಈ ಗ್ರಂಥವು ಸಕಲ ಜನ ಹಿತೋಪದೇಶವಾಗಿರುವದರಿಂದ ಓದುವದಕ್ಕೆ ಬೇಸರಗೊಳ್ಳದೆ ಆದಿಯಿಂದ ಅಂತ್ಯದವರೆಗೂ ಚೆನ್ನಾಗಿ ನೋಡಿ ತಿಳಿಯಬೇಕು. ಬಾಹುಲ್ಯವದೆ ಎಂದು ಭಯಪಡಬಾರದು. ಮತ್ತು ಭೂಗೋಲ ಶಾಸ್ತ್ರ ಖಗೋಲ ಶಾಸ್ತ್ರ ಸೂಪಶಾಸ್ತ್ರ ಪದಾರ್ಥವಿಜ್ಞಾನಶಾಸ್ತ್ರ ಮೊದಲಾದವುಗಳನ್ನು ರಚಿಸಬೇಕಾದರೆ ಸಂಜ್ಞೆ ಮಾತ್ರದಿಂದ ಸಂಕ್ಷೇಪವಾಗಿ ತಿಳಿಸಿದರೆ ಹೇಗೆ ತಿಳಿದಾವು ? ಮತ್ತು ಭಾರತ ರಾಮಾಯಣಾದಿ ಶಾಸ್ತ್ರಗಳನ್ನು ಅತಿ ಸಂಕ್ಷೇಪವಾಗಿ, ಕಟ್ಟಿದ, ಹೊಡೆದ, ತಂದ ಎಂದರೆ ಇದರಲ್ಲೇನು ತಿಳಿಯಬಹುದು ? ಇದಲ್ಲದೆ ಸೇತುವೆಯ ಕಟ್ಟಿದ, ರಾವಣಾದಿ ರಕ್ಕಸರ ಸಂಹರಿಸಿದ

ಜಾನಕಿಯನ್ನು ತಂದ. ಎಂದು ಹೇಳಿದರೆ ರಾಮಾಯಣ ಸಂಪೂರ್ಣವಾಯಿತೇ? ಮೊದಲೇ ರಾಮಾಯಣದ ಸಕಲ ಸಾರವನ್ನು ಚೆನ್ನಾಗಿ ತಿಳಿದವನಾದರೆ ಇಷ್ಟೇ ಸಾಕು. ಆದರೆ ಎಂದೆಂದು ರಾಮಾಯಣವನ್ನು ಕೇಳದೆ ಇದ್ದವನಿಗೆ ಅದರ ಸಾರ ಯಾವತ್ತು ಹೇಗೆ ಗೋಚರವಾದೀತು? ಅದು ಕಾರಣ ಸರ್ವರಿಗೆ ತಿಳಿಯಬೇಕೆಂದು ವಾಲ್ಮೀಕಿ ಮಹಾ ಮುನಿಯು ಶತಕೋಟಿ ಗ್ರಂಥ ಸಂಖ್ಯೆಯನುಳ್ಳ ಷಟ್ಕಾಂಡ ರಾಮಾಯಣವನ್ನು ಕಥಾಭಾಗ ವಿಸ್ತಾರವಾಗಿ ರಚಿಸಿರುವನು. ಅದರಂತೆ ಈ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥವು ಲೋಕೋಪಕಾರಾರ್ಥವಾಗಿ ಮೂಢರಿಗೂ ಪ್ರೌಢರಿಗೂ ಸಹ ಉಪಯೋಗವಾಗುವ ಹಾಗೆ ಬಾಹುಲ್ಯವಾಗಿ ರಚಿಸಬೇಕಾಗಿದೆ. ಇದನ್ನು ಸಂಕ್ಷೇಪವಾಗಿ ಹೇಳಿದರೆ ಕೃಷಿಕರಾದ ಸಮಸ್ತ ರೈತ ಜನರಿಗೆ ಉಪಯೋಗವಾಗದು. ಮತ್ತು ಈ ಗ್ರಂಥದಲ್ಲಿ ಬಂದ ಮಾತುಗಳೇ ಪುನಃ ಪುನಃ ಅಲ್ಲಲ್ಲಿಗೆ ಬಂದಿರುವವೆಂದು ಧಿಃಕ್ಕಾರ ಮಾಡಲಾಗದು. ಏತಕ್ಕೆಂದರೆ ಕೃಷಿಕರು ಮಂದಮತಿಗಳಾದುದರಿಂದ ಒಂದೊಂದು ಮಾತನ್ನು ಹತ್ತು ಹತ್ತು ವೇಳೆ ತಿಳಿಸಿದರೂ ನಿದರ್ಶನಕ್ಕೆ ನಿಲ್ಲುವದು ದುರ್ಲಭವಾಗುತ್ತದೆ. ಅದು ಕಾರಣ ಇವರಿಗೆ ಅದರಂತೆ ಹೇಳತಕ್ಕದ್ದಾಗಿದೆ.

ಸಮಸ್ತ ದೇಶಗಳ ಭೂಪತಿಗಳು ಮತ್ತು ಸಕಲ ವಿದ್ಯಾ-ಕಲಾ-ಕೌಶಲ್ಯ ಪ್ರವೀಣರಾದ ಮಂತ್ರಿಗಳು ಸರ್ವಶಾಸ್ತ್ರ ಪುರಾಣ ಕವಿತಾ ಮುಖ್ಯ ಸಂಗೀತ ಸಾಹಿತ್ಯ ವಿಶಾರದರಾದ ಪಂಡಿತರುಗಳು ಮತ್ತು ಕುಶಲಮತಿಗಳಾದ ಸರ್ವ ಶಾಸ್ತ್ರಸಾರಜ್ಞರಾದ ಪ್ರೌಢರು ವಾಣಿಜ್ಯಾದಿ ವ್ಯವಹಾರ ಚಾತುರ್ಯರಾದ ಸಕಲ ವ್ಯಾಪಾರಿಗಳು ಕೃಷಿಕರಲ್ಲಿ ರಾಜಬುದ್ಧಿಯನುಳ್ಳ ರಾಜಕೃಷಿಕರಾದ ಕೃಷಿ ಕರ್ಮ ವಿದಗ್ಧರು ಇದಲ್ಲದೆ ಮಂದಮತಿಗಳಾದ ಜಾಡ್ಯ ಬುದ್ಧಿಯನುಳ್ಳ ಗಾಂಪರು ಮತ್ತು ಮಾಡಿ ಉಣ್ಣಲಾರದ ಮೈಗಳ್ಳರು ಪರಾನ್ನಾಪೇಕ್ಷಿತ ಜಿಹ್ವೆಯನುಳ್ಳ ಗುಪ್ತಯಾಚಕರು ಮುಂದಿನ ಲಾಭ ಚಿಹ್ನದ ಊಹೆಯನ್ನರಿಯದ ಮುಗ್ಧರು ಮತ್ತು ಬುದ್ಧಿಯನ್ನು ಹೇಳಿದವರೊಡನೆ ಗುದ್ದ್ಯಾಟಕ್ಕೂ ಸಿದ್ಧವಾಗುವ ಮುರ್ಖರುಗಳು ಮುಖ್ಯವಾದ ಸಮಸ್ತರಿಗೂ ನಾನು ಪ್ರಾರ್ಥಿಸುವದೇನಂದರೆ:—

ಪ್ರಾಜ್ಞರಾದ ಶಾಸ್ತ್ರಜ್ಞರೆಲ್ಲರು ಈ ಲೋಕೋಪಕಾರ ಶಾಸ್ತ್ರವಾದ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥವ ನೋಡಿ ಇದು ಕನ್ನಡ ವಾಚ್ಯರೂಪವಾದುದರಿಂದ ಇದೇನು ಸಂಸ್ಕೃತವಾದುದಲ್ಲ ಮತ್ತು ಪದಪದ್ಯ ಪ್ರಬಂಧವಲ್ಲ ಇದೇತರದ ಕವಿತೆ ಎಂದು ತಾತ್ಸಾರ ಮಾಡುವರು. ಮಾಡಿದರೂ ಮಾಡಲಿ. ಅದು ವಿದ್ಯಾಮದದ ಗುಣವು. ಅದಂತಿರಲಿ. ಸಕಲ ಶಾಸ್ತ್ರಂಗಳೆಲ್ಲ ಮಾತಿನ ಮಕ್ಕಳಾದ ಕಾರಣ ಕನ್ನಡವಾದರೇನು, ಸಂಸ್ಕೃತವಾದರೇನು,

ಆಂಧ್ರ ಫಾರ್ಸಿ ಇಂಗ್ಲೀಷ ಭಾಷೆಯಾದರೇನು, ಭಾಷಾ ಭೇದವಲ್ಲದೆ ಸಾರ ವೆಲ್ಲ ಒಂದೇ ಇರ್ಪುದು. ಅದು ಕಾರಣ ಬಲ್ಲವರು ಈ ಶಾಸ್ತ್ರವನುಪೇಕ್ಷಿಸದೆ ಈ ಗ್ರಂಥ ರಚನಾ ಕರ್ತೃಗಳನ್ನು ತಿರಸ್ಕರಿಸುತ್ತಾದರೂ ಚೆನ್ನಾಗಿ ಓದಿನೋಡಿ ಇದರ ಅಭಿಪ್ರಾಯವನ್ನು ತಿಳಿದು ಕುಶಲಮತಿಗಳಾಗಿ ಅದರಂತೆ ಪ್ರಯತ್ನಮಾಡಿ ಭೋಗ ಮೋಕ್ಷಂಗಳನ್ನು ಪಡೆಯತಕ್ಕದ್ದೆಂದು ಪ್ರಾರ್ಥಿಸುವೇನು.

ಸರ್ವಶಾಸ್ತ್ರ ಸಾರಜ್ಞರಾದ ಪೌಢರಿಗೆ ಹಾಗೂ ವಾಣಿಜ್ಯಾದಿ ಸಕಲ ವ್ಯವಹಾರ ಚಾತುರ್ಯರುಗಳಿಗೆ ಕೃಷಿ ಎಂಬುದು ಅಲಕ್ಷ್ಯವಾದ ಕಾರಣ ಈ ಕೃಷಿಜ್ಞಾನ ಪ್ರದೀಪಿಕೆ ಎಂದರೆ ಅವರೆಲ್ಲರು ಇದರ ಸಾರವನ್ನರಿಯದೆ ದೂಷಿಸಿ ಉಪೇಕ್ಷೆ ಮಾಡತಕ್ಕವರೇ ಸರಿ. ಆದಾಗ್ಯೂ ಸಮಸ್ತ ವ್ಯಾಪಾರಿಗಳೆಲ್ಲರಿಗೂ ಹೇಳತಕ್ಕದ್ದೇನಂದರೆ ಕೋಟಿ ವ್ಯಾಪಾರಗಳೆಲ್ಲ ಮೇಟಿಯ ಸಮವಲ್ಲವೆಂಬ ಲೋಕದ ಗಾದೆಯುಂಟಾಗಿರ್ಪುದು. ಮತ್ತು ವ್ಯಾಪಾರಿಗಳೆಲ್ಲರೂ ಕೊಟ್ಟು ಚಿಂತಿಸುವರು, ಇಟ್ಟು ಚಿಂತಿಸುವರು. ಕೃಷಿಕರು ನಿಶ್ಚಿಂತರಾದ ಕಾರಣ, 'ಬಾದಶಾಹಾ' ರೈತರು ಎಂಬುದು ಪ್ರಸಿದ್ಧವಾಗಿದೆ.

ಈ ಕೃಷಿಯೊಂದು ಸಾಗದಿದ್ದರೆ ಸಕಲ ವ್ಯಾಪಾರಿಗಳು ಸಮಸ್ತ ಶಾಸ್ತ್ರಜ್ಞರು ಮೂಢರು ಪೌಢರು ಮೂರ್ಖರು ಪಂಡಿತರು ಮೊದಲಾದವರೆಲ್ಲರು ದುಃಖಾಬ್ಧಿಯೊಳು ಮುಳುಗುವರಲ್ಲದೆ ಯಾರಿಗೂ ಪರಿಣಾಮವಿಲ್ಲ. ವ್ಯಾಪಾರಕ್ಕಾದರೂ ಕೃಷಿಯೇ ಮುಖ್ಯ. ರಾಜ್ಯಕಾರ್ಯ ಸಮರ್ಥರಾದ ಭೂಪಾಲರಿಗಾದರೂ ವೀರರಿಗೂ ಧೀರರಿಗೂ ವೇದಾಗಮ ಶಾಸ್ತ್ರ ಪುರಾಣ ಪಂಡಿತರಿಗೂ ಸೇವಾ ಯಾಚನಾದಿ ಷಟ್ಕೃತ್ಯಂಗಳಿಗಾದರೂ ಕೃಷಿಯೇ ಮುಖ್ಯವು. ಅನ್ನವೇ ಆನಂದದ ಬೀಜವು. ಭೂಮಿಯಿಂದ ಬೆಳೆಯುವ ಸಕಲ ಪದಾರ್ಥಗಳು ಬೆಳೆಯದಿದ್ದರೆ ಲೋಕವ್ಯವಹಾರವೇ ನಿಲ್ಲುವದು. ಮತ್ತು ವ್ಯಾಪಾರಿಗಳು ತಂದು ತಂದು ಮಾರುವ ಪದಾರ್ಥಗಳೆಲ್ಲ ಭೂಮಿಯಿಂದ ಉತ್ಪನ್ನವಾಗತಕ್ಕವುಗಳಾದ ಕಾರಣ ಕೃಷಿಯು ತಡೆದರೆ ಸಕಲ ವ್ಯಾಪಾರವೇ ತಡೆಯುವದು. ಒಂದು ವೇಳೆಗೆ ಪಾರಜ, ಚಂದ್ರ, ಹುರಿಮಂಜು, ಅರದಾಳ, ತಾಳಕ, ಇಂಗ್ಲೀಕ, ಗಂದಕ, ಮುಡದಾರಸಿಂಗಿ, ವಚನಾಭಿ, ಪಾಷಾಣ, ಸಂಗಜೀರಿಗೆ, ಸೋರುಪ್ಪು, ಉಪ್ಪು, ಪಂಚವಿಧ, ಲವಣ ಮೊದಲಾದ ಖನಿಜ ಪದಾರ್ಥಗಳನ್ನು ಒಂದು ವೇಳೆ ತಂದು ಮಾರಿದರೆ ಬಂದೀತೆಂಬರು. ಅನ್ನ ವಸ್ತ್ರಂಗಳಿಲ್ಲದಿದ್ದರೆ ಅಖಿಳಪದಾರ್ಥಗಳನ್ನು ಕೊಂಬುವರಾರು ? ಆತ್ಮ ಹಿತವಾದದ್ದೇ ಅನ್ನಪದಾರ್ಥವು. ಈ ಅನ್ನ ವಸ್ತ್ರಂಗಳೆರಡು ಕೃಷಿಯಿಂದುತ್ಪನ್ನವಾಗುಹವು. ಆದ ಕಾರಣ ಅಖಿಳ ಶಾಸ್ತ್ರಂಗಳೆಲ್ಲ ಅನ್ನದ ಮಕ್ಕಳೆಂಬ ಗಾದೆಯುಂಟು. ಮತ್ತು ರಂಜನೆಯ ಬೀಜಕ್ಕೆ ರಾಗ ಮೂವತ್ತೆರಡು ಎಂದ

ಹಾಗೆ ಕೃಷಿಕರು ಸಕಲ ಪದಾರ್ಥಗಳನ್ನು ಸಮೃದ್ಧಿಯಾಗಿ ಬೆಳೆದರೆ ಸರ್ವರೂ ಆನಂದದಿಂದ ಬದುಕುವರು. ಕೃಷಿಕೆಲಸ ಒಂದು ತಪ್ಪಿದರೆ ಭೂಮಿ ಯಾವತ್ತಕ್ಕು ಕ್ಷಾಮಕಾಲವಾಗಿ ಸರ್ವರೂ ದೇಶಭ್ರಷ್ಟರಾಗಿ ಓಡಾಡುವರು. ಇಂಥ ಕ್ಷಾಮ ಕಾಲವು ಕೆಲವು ವರ್ಷಗಳ ಹಿಂದೆ ಅನಂತ ವೇಳೆ ಆಗಿ ಎಷ್ಟೋ ಅನರ್ಥಗಳಾಗಿ ಬಹು ಜನರು ಸತ್ತರೆಂದು ಕೇಳುತ್ತಿದ್ದೆವು. ಆದರೆ ಈ ಕ್ಷಾಮಕಾಲದ ಅನುಭವವು ಈ ನಾಲ್ಕು ವರ್ಷದ ದುಷ್ಕಾಳದಲ್ಲಿ ದಕ್ಷಿಣ ಪ್ರಾಂತದ ಸರ್ವಜನರಿಗೂ ಪೂರ್ಣ ಗೊತ್ತಾಗಿರಬಹುದು. ಇದರ ವಿಷಯಕ್ಕೆ ಬಹಳ ಹೇಳತಕ್ಕದ್ದೇನದೆ ? ಕೃಷಿತೋ ನಾಸ್ತಿ ದುರ್ಭಿಕ್ಷವೆಂಬ ಪ್ರಮಾಣ ವಿರಲಾಗಿ ಕೃಷಿಯ ಜ್ಞಾನದ ಯುಕ್ತಿಯನ್ನರಿಯದೆ ದುಷ್ಕಾಲದ ತಾಪವನ್ನು ಭೋಗಿಸಬೇಕಾಯಿತು. ಇನ್ನು ಮೇಲಾದರೂ ಸಕಲರು ಈ ಗ್ರಂಥವನ್ನು ಚೆನ್ನಾಗಿ ಓದಿ ಇದರ ಸಾರವನ್ನು ತಿಳಿದು ಯುಕ್ತಿಯಿಂದ ಯತ್ನಮಾಡಿ ಧನ ಧಾನ್ಯ ಸಂಪನ್ನರಾಗಿ ಸೌಖ್ಯ ಪಡತಕ್ಕದೆಂದು ಪ್ರಾರ್ಥಿಸುವೆನು.

ಇದಲ್ಲದೆ ಸಮಸ್ತ ದೇಶದ ಸಕಲ ಭೂಪತಿಗಳು ಮತ್ತು ಸಮಸ್ತ ವಿದ್ಯಾ ವಿಶಾರದರಾದ ಕಲಾಕೌಶಲ್ಯಪ್ರವೀಣರಾದ ಮಂತ್ರಿಗಳು ಸಮಸ್ತ ರಾಜ್ಯಭಾರದ ಹುದ್ದೇದಾರರು ರಾಜಬುದ್ಧಿಯುಳ್ಳ ರಾಜಕೃಷಿಕರು ಮತ್ತು ಕುಶಲ ಮತಿಗಳಾದ ಪ್ರೌಢರು ವಿದಗ್ಧರೆಲ್ಲರನ್ನು ಕುರಿತು ವಿನಯಪೂರ್ವಕವಾಗಿ ವಿಜ್ಞಾಪನೆ ಮಾಡುವದೇನಂದರೆ, ಈ ಲೋಕದ ಸಮಸ್ತ ಜನರ ಭುಕ್ತಿ ಮುಕ್ತಿಯ ವಿಷಯದಲ್ಲಿ ಪರಮೋಪಕಾರ ಶಾಸ್ತ್ರವಾದ ಈ ಕೃಷಿಜ್ಞಾನ ಪ್ರದೀಪಿಕೆಯನ್ನು ಅಲಕ್ಷದಿಂದ ಅಲ್ಪಸ್ವಲ್ಪ ಹಾರಿಕೆಯ ಮೇಲೆ ನೋಡಿ ಇದರ ಸಾರವನ್ನು ಚೆನ್ನಾಗಿ ಪರೀಕ್ಷಿಸದೆ ಧಿಕ್ಕರಿಸಬಾರದು. ಕೆಲವರು ಅನ್ನುವದೇನೆಂದರೆ ಭೂ ನಿರ್ಮಾಣಕಾಲದಿಂದ ಇವೊತ್ತಿನ ವರೆಗೂ ಸರ್ವ ಜನರು ಹರಗಿ ಬಿತ್ತುವದಕ್ಕೆ ಬಲ್ಲದ್ದೇ ಸರಿ. ಇದಾವ ಘನಮಾತು ? ಈ ಕೃಷಿ ಕೆಲಸವನ್ನರಿಯದವರಾರು ? ಈ ಕೃಷಿ ಪ್ರಶಂಸೆಯನ್ನು ಇಷ್ಟು ವರ್ಣನೆ ಅತಿ ಬಾಹುಲ್ಯವಾಗಿ ಘನಶಾಸ್ತ್ರದಂತೆ ವಿಸ್ತರಿಸಿ ದೊಡ್ಡ ಗ್ರಂಥವ ಮಾಡಿ ಬರೆಯಬೇಕಾದರೆ ಇವನಿಗೆ ಮತ್ತೇನು ಕೆಲಸವಿದ್ದಿಲ್ಲವೇ ? ಎಂದು ನನ್ನನ್ನು ಕುರಿತು ಹಾಸ್ಯವನ್ನು ಮಾಡುವರು... ಮಾಡಿದರೂ ಮಾಡಲಿ. ಈ ಗ್ರಂಥಸಾರವನ್ನು ಚೆನ್ನಾಗಿ ತಿಳಿದ ಮೇಲೆ ಯಾರೂ ಹಾಸ್ಯಮಾಡಲಿಕ್ಕಿಲ್ಲವು. ಅಂದರೆ ಈ ಗ್ರಂಥ ಪ್ರಶಂಸೆಯನ್ನು ಸರ್ವರಿಗೂ ಶೃತಗೊಳಿಸುವದೇನಂದರೆ, ನನ್ನ ಬುದ್ಧಿ ಅಲ್ಪವಾದರೇನಾಯಿತು ? ಈ ಗ್ರಂಥವು ಸರ್ವರಿಗೂ ಪ್ರಾಣಪದವಾದದ್ದು, ಹೇಗೆಂದರೆ ಸಮಸ್ತ ಮಹಾರಾಜರುಗಳು ಮತ್ತು ರಾಜಪಂಡಿತರು ಹಾಗೂ ಸರ್ವಜ್ಞಾನಿಗಳಾದ ಬುದ್ಧಿಶಾಲಿಗಳೆಲ್ಲರು ಈ ಕೃಷಿಜ್ಞಾನ ಶಾಸ್ತ್ರವನ್ನು ಉಪೇಕ್ಷಿಸಲಾಗದೆಂದು ನನ್ನ ವಿಜ್ಞಾಪನೆಯಿದೆ. ಮತ್ತು ಸೂರ್ಯನೆದುರಿನಲ್ಲಿ ದೀವಟಿಗೆಯಂತೆ

ನಾನಿರುವೆನು. ಆದಾಗ್ಯೂ ಸರ್ವಜ್ಞರಾದವರ ಮುಂದೆ ನನ್ನ ಬುದ್ಧಿಯು ಎಷ್ಟು ಮಾತ್ರದ್ದು ? ಪ್ರಾಜ್ಞರೆದುರಿನಲ್ಲಿ ನನ್ನ ಬುದ್ಧಿಯು ಕೋಟ್ಯಂಶದಲ್ಲಿ ಒಂದಂಶಕ್ಕೆ ಸರಿಬಾರದು. ಹೇಗೆಂದರೆ ಜಗಚ್ಚಕ್ಷುವಾದ ಚಂದ್ರನ ಪ್ರಕಾಶದಂತೆ ತಮ್ಮ ಬುದ್ಧಿಯು ಅಲ್ಪವಾದ ದೀವಿಗೆಯಂತೆ ಎನ್ನ ಬುದ್ಧಿಯು ಆದಾಗ್ಯೂ ಷೋಡಶ ಕಲಾ ಪರಿಪೂರ್ಣವಾದ ಚಂದ್ರನ ಪ್ರಕಾಶವು ಜಗತ್ಪರಿಪೂರ್ಣವಾಗಿದ್ದ ಕಾಲಕ್ಕೂ ಮನೆಯೊಳಗಿರ್ದ ಒಂದು ಪದಾರ್ಥವ ಹುಡುಕುವದಕ್ಕೆ ದೀವಿಗೆಯು ಮುಖ್ಯ ಪ್ರಯೋಜನವು. ಇದಲ್ಲದೆ ಜಗನ್ನೇತ್ರವಾದ ಸಹಸ್ರ ಕಿರಣಗಳುಳ್ಳ ಸೂರ್ಯನ ಪ್ರಕಾಶದಂತೆ ಪ್ರಾಜ್ಞರ ಬುದ್ಧಿಯು, ಸ್ವಲ್ಪ ಮಾತ್ರ ನೇತ್ರದ ತೇಜದಂತೆ ಎನ್ನ ಬುದ್ಧಿಯು, ರಥದ ಚಮತ್ಕಾರ ಸಾಧನ ಕೆಲಸಗಳಂತೆ ಬುದ್ಧಿವಂತರ ತಿಳುವಳಿಕೆ, ಗಾಲಿಯ ಹಿಂದಿನ ಅಚ್ಚಿನ ಹುಗಲಲ್ಲಿ ಸೇರಿಸಿದ ಸಣ್ಣ ಕೀಲಿನಂತೆ ನನ್ನ ಬುದ್ಧಿಯು, ರಸರಸಾಯನಾದಿ ಪದಾರ್ಥ ಸಂಗ್ರಹದಂತೆ ಬುದ್ಧಿವಂತರ ಯುಕ್ತಿಯು, ಸ್ವಲ್ಪತರವಾದ ಉಪ್ಪಿನ ಹರಳಿನ ಹಾಗೆ ನನ್ನ ಬುದ್ಧಿಯು, ಅಮೌಲ್ಯತರವಾದ ನವರತ್ನಾದಿಗಳಂತೆ ಪ್ರಾಜ್ಞರ ಜ್ಞಾನವು, ದಾರದಂತೆ ಎನ್ನ ಬುದ್ಧಿಯು, ಮತ್ತು ಆನೆಯ ಹಾಗೆ ಬುದ್ಧಿಶಾಲಿಗಳ ಕಲ್ಪನೆಯು, ಅತಿ ಸೂಕ್ಷ್ಮ ಪ್ರಾಣಿಯಾದ ಇರುವೆಯ ಹಾಗೆ ನನ್ನ ಬುದ್ಧಿಯು, ಈ ರೀತಿಯಿಂದ ಸಮಸ್ತ ಬುದ್ಧಿಶಾಲಿಗಳ ಎದುರಿನಲ್ಲಿ ನನ್ನ ಬುದ್ಧಿಯು ಕೋಟ್ಯಂಶಕ್ಕೆ ಒಂದಂಶವಾಗದೆ ಅತಿ ಸೂಕ್ಷ್ಮವಾಗಿ ಇದ್ದಾಗ್ಯೂ ದರೂ ಈಗ ರಚಿಸಿರುವ ಗ್ರಂಥವು ಸಮಸ್ತ ಜನರ ಪ್ರಾಣರಕ್ಷಣಕ್ಕಾಧಾರವಾದದ್ದು. ನನ್ನ ಬುದ್ಧಿ ಸಾಮಾನ್ಯವಾದರೂ ಈ ಗ್ರಂಥದೊಳು ಬರೆದಿರುವ ಯುಕ್ತಿಯು ಈ ಗ್ರಂಥದ ಫಲವು ಪ್ರಯೋಜನವು ಲೋಕಹಿತವಾದದ್ದು. ಇದರಲ್ಲಿ ಹೇಳಿದ ಸಕಲ ಯುಕ್ತಿಗಳನ್ನು ತಿಳಿದು ಜನರೆಲ್ಲರು ಅದರಂತೆ ಯತ್ನ ಮಾಡಿದರೆ ಈ ಜಗತ್ತೆಲ್ಲ ಮಹದೈಶ್ವರ್ಯದಿಂದ ತುಂಬಲ್ಪಡುವದು. ಮತ್ತು ಜ್ಞಾನಿಗಳಾದರೆ ಈ ಗ್ರಂಥಾಧಾರದಿಂದ ವೀರಶೈವಾಚಾರಸಂಪನ್ನರಾಗಿ ನಿಜಾನಂದ ಮೋಕ್ಷಸುಖವನ್ನು ಹೊಂದುವದಕ್ಕೆ ಸಂಶಯವಿಲ್ಲವು.

ಭೂಲೋಕದ ಸರ್ವಜನ ಹಿತವಾದ ಈ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥವು ಕಲ್ಪವೃಕ್ಷದಂತೆ ಬಹು ಕಲ್ಪಿತಾರ್ಥಂಗಳುಳ್ಳದ್ದಾಗಿ ಚಿಂತಾಮಣಿಯಂತೆ ಸದ್ಯೋಸ್ಮುಕ್ತಿ 'ಚಿಂತಿತಾರ್ಥಂಗಳನುಳ್ಳದ್ದಾಗಿ ಮರು ಜೀವಣಿಯಂತೆ ದುರ್ಭಿಕ್ಷಾದಿಗಳಿಂದ ಕಾಲಮರಣಂಗಳಿಲ್ಲದಂತೆ ಪಾಲನ ಮಾಡುವದಾಗಿ ಪರುಷದ ಕಣಿಯಂತೆ ಸವೆಯದ ಭಾಗ್ಯ ಧನ ಧಾನ್ಯ ಫಲಪದಾರ್ಥಂಗಳನ್ನೆಲ್ಲ ಕೊಡತಕ್ಕದಾಗಿ ಸಕಲ ಸುಖಸಾರ ಸಮೃದ್ಧಿಯಿಂದ ಒಪ್ಪುವ ರತ್ನಾಕರದಂತೆ ಈ ದಿವ್ಯ ಗ್ರಂಥವು ಆದ್ಯರ ವಚನ ಶೃತಿ ಸ್ಮೃತಿಗಳ ದೃಷ್ಟಾಂತಗಳಿಂದಲೂ

ಲೋಕದೃಷ್ಟ ಶಾಸ್ತ್ರದೃಷ್ಟ ಲೋಕದ ಗಾದೆಯು ನೀತಿಗಳಿಂದಲೂ ಚಾತುರ್ಯ ಶೃಂಗಾರ ಹಾಸ್ಯ ಬೀಭತ್ಸ ಭಯ ಲಜ್ಜೆ ಜಿಗುಪ್ಸೆ ಭೋಗವಿಲಾಸ ಆನಂದ ವೆನಿಪ ನವರಸಾಲಂಕಾರಯುಕ್ತವಾಗಿರ್ದು ಭೋಗ ಮೋಕ್ಷಪ್ರದವಾಗಿರುವ ವದರಿಂದ ಭುಕ್ತಿ ಮುಕ್ತ್ಯಪೇಕ್ಷಿತರೆಲ್ಲರು ಸರ್ವ ಜ್ಞಾನಸಾರವಾದ ಈ ಗ್ರಂಥ ವನ್ನು ಓದಿ ಕೇಳಿ ಸಮಸ್ತ ಬುದ್ಧಿಶಾಲಿಗಳಾದವರೆಲ್ಲರು ಗ್ರಂಥಕ್ಕೆ ಆಶ್ರಯ ಕೊಟ್ಟು ನನ್ನ ಸ್ವಲ್ಪ ಬುದ್ಧಿಯ ವಿಷಯದಲ್ಲಿಯೇ ಏನಾದರೂ ಹೆಚ್ಚು ಕಡಿಮೆ ಯಾಗಿ ಕಾಣಬಂದರೆ ಅದನ್ನು ತಿಳಿಸಿದರೆ ತಮ್ಮ ಉಪಕಾರವನ್ನು ಸ್ಮರಿಸಿ ತಿದ್ದಿಕೊಂಬುವೆನು. ಸರ್ವ ನೀತಿಯ ವಿಷಯಗಳಲ್ಲಿ ಚಮತ್ಕಾರ ಮತ್ತು ಚಾತುರ್ಯ ಹಾಗೂ ರಸಹಾಸ್ಯ ವಿನೋದವಾಕ್ಯಗಳೇನಾದರೂ ಊಹಿಸಿದರೆ ಅವುಗಳನ್ನು ಬರೆದು ತಿಳುಹಿಸಿ ಕಲ್ಪವೃಕ್ಷದಂತೆ ಈ ಗ್ರಂಥವನ್ನು ಬೆಳೆಸಿದರೆ ಲೋಕಹಿತವಾಗಿರುವದು. ಮತ್ತು ಅನಭ್ಯಾಸಿಗಳಾದವರು ಈ ಗ್ರಂಥಸಾರದ ರುಚಿಯನ್ನರಿಯದೆ ಜೇಡನ ಹುಳದ ಸೂತ್ರದಂತೆ ಸುಮ್ಮನೆ ಉದ್ದಕ್ಕೆ ಬರೆದಿ ಹನೆಂದು ಹಾಸ್ಯಭಾವದಿ ನುಡಿವರು. ಅದು ಉಪಯೋಗವಲ್ಲವು. ಬುದ್ಧಿ ವಂತರು ಬೇಸರವಿಲ್ಲದೆ ಚೆನ್ನಾಗಿ ಓದಿ ತಿಳಿಯಬೇಕು ಮತ್ತು ಸರ್ವರಿಗೂ ತಿಳಿಸಬೇಕು.

ಇಲ್ಲಿಯವರೆಗೂ ಈ ಗ್ರಂಥಸಾರವನ್ನು ಚೆನ್ನಾಗಿ ತಿಳಿಯಬೇಕೆಂದು ಪ್ರಾಜ್ಞರನ್ನು ಕುರಿತು ಪ್ರಾರ್ಥಿಸಿದೆನು. ಇನ್ನು ಮೇಲೆ ಬುದ್ಧಿಯನ್ನು ಹೇಳು ದವಕ್ಕೆ ಹೋದರೆ ಇದ್ದ ಮತಿ ಹೋಗಿ ಗುದ್ಯಾಟಕ್ಕೆ ನಿಲ್ಲುವ ದುರ್ವಾದಿಗ ಳಾದ ಮೂರ್ಖರ ವಿಷಯವಾಗಿ ಮತ್ತು ಸಕಲ ಚಾತುರ್ಯ ಬುದ್ಧಿಯನ ರಿಯದ ಮುಗ್ಧರ ವಿಷಯವಾಗಿ ವಿನಯಪೂರ್ವಕದಿಂದ ಅವರವರ ಹಿತಕ್ಕಾಗಿ ಪ್ರಾರ್ಥಿಸುವೆನು. ಹೇಗೆಂದರೆ ಈ ಗ್ರಂಥಸಾರವನ್ನು ಚೆನ್ನಾಗಿ ಕೇಳುವಲ್ಲಿ ನಿಮ್ಮ ನಿಮ್ಮ ಮಾತಿನ ಅಭಿಪ್ರಾಯದ ಪಾಠವನ್ನೇ ಸಾಧಿಸಬೇಕೆಂಬ ಛಲವನ್ನು ಹಿಡಿದು ವಾದಿಸದೆ ಚೆನ್ನಾಗಿ ಮನಸ್ಸು ಕೊಟ್ಟು ಕೇಳಿ ಇದರ ಅರ್ಥವನ್ನು ತಿಳಿದು ಅದರಂತೆ ಸರ್ವ ಪ್ರಯತ್ನಮಾಡಿ ಸಕಲ ಧಾನ್ಯ ಸಮಸ್ತ ಫಲ ಪದಾರ್ಥಗಳನ್ನು ಬೆಳೆದು ಸಕಲೈಶ್ವರ್ಯ ಸಂಪನ್ನರಾಗಬೇಕೆಂದು ಪ್ರಾರ್ಥಿಸುವೆನು. ಯಾತಕ್ಕೆಂದರೆ ಜಗತ್ತು ಎಲ್ಲದರಲ್ಲಿ ದಾರಿದ್ರ್ಯ ದುರ್ಭಿಕ್ಷಂಗಳಿಲ್ಲದಂತಾಗಿ ಒಂದು ವರ್ಷ ಕಷ್ಟ ಪಟ್ಟು ಇದರಲ್ಲಿ ಹೇಳಿದಂತೆ ಮಾಡಿದರೆ ಹತ್ತು ವರ್ಷ ಕೂತು ಉಂಬುವಷ್ಟು ಪದಾರ್ಥಗಳನ್ನು ಬೆಳೆದು ಸರ್ವರೂ ಮಹದೈಶ್ವರ್ಯದಿಂದಿರ ಬೇಕೆಂಬುವದೇ ನನ್ನ ಅಭಿಪ್ರಾಯವು. ಅದು ಕಾರಣ ಪದಾರ್ಥವಿಜ್ಞಾನಾದಿ ಸಮಸ್ತ ಜ್ಞಾನೋತ್ಪತ್ತಿಗೆ ಶ್ರವಣವೇ ಮುಖ್ಯವಾದ ಕಾರಣ ಈ ಗ್ರಂಥ ಶ್ರವ ಣಾಧಿಕ್ಯವನ್ನು ಹೇಳುತ್ತೇನೆ.

# ಗ್ರಂಥಶ್ರವಣಾತಿಶಯುವವು.

ಸರ್ವ ಸಾಧನಂಗಳಿಗೂ ಸಮಸ್ತ ಜ್ಞಾನೋತ್ಪತ್ತಿಗೂ ಶ್ರವಣವೇ ಮುಖ್ಯ ವಾದ ಕಾರಣ ಶ್ರವಣವಿಲ್ಲದವನಿಗೆ ಶಬ್ದಾರ್ಥ ಜ್ಞಾನಸಾಧನಗಳು ಗೋಚರಿ- ಸುವದಿಲ್ಲವು. ಅದು ಹೇಗೆಂದರೆ ಬಾಲ್ಯದಲ್ಲಿ ಕಿವಿಗಳು ಚೆನ್ನಾಗಿ ಕೇಳಬರು- ತ್ತಿದ್ದರೆ ಅಕ್ಷರವಾಚನವು ಚೆನ್ನಾಗಿ ಹೊರಡುತ್ತದೆ. ಸ್ವಲ್ಪ ಮಧ್ಯಮ ಪೈಕಿ ಯಾದರೂ ಕೇಳಬರುತ್ತಿದ್ದು ನಾಲಿಗೆಯು ದಪ್ಪಾಗಿದ್ದರೆ ತೊದಲು ನುಡಿಗ- ಳಾಡಿದ ಕಾಲಕ್ಕೆ ಕಿವಿಗಳು ಕೇಳುತ್ತಿದ್ದ ಕಾರಣ ಮುಂದೆ ಶಬ್ದಜ್ಞಾನವಾಗುವ ದೆಂದು ತಿಳಿಯಬಹುದು. ಸ್ವಲ್ಪಾದರೂ ಕಿವಿ ಕೇಳದೆ ಇದ್ದಲ್ಲಿ ಆತನಿಗೆ ಶಬ್ದ ಜ್ಞಾನವಿಲ್ಲದಾಗಿ ಮೂಕನಾನುವನೆಂದು ಬಲ್ಲವರು ಸ್ಪಷ್ಟವಾಗಿ ತಿಳಿಯುತ್ತಾರೆ. ಹೇಗೆಂದರೆ ಕಿವುಡರಲ್ಲಿ ಕೆಲವರಿಗೆ ಶಬ್ದಜ್ಞಾನವಿರಬೇಕಾದರೆ ಬಾಲ್ಯದಲ್ಲಿ ಕಿವಿ ಗಳು ಕೇಳುತ್ತಿದ್ದು ಕೆಲವು ದಿವಸದ ಮೇಲೆ ರೋಗದಿಂದ ಕಿವಿಗಳು ಮಂದವಾಗಿ- ದ್ದರೆ ಮಾತಾಡುವದಕ್ಕೆ ಬರುವದು. ಆದರೆ ಕವಿಗಳು ಕೇಳಿಸುವದಿಲ್ಲವು. ಬಹಳ ವಾಗಿ ಬಾಯಿ ಮಾಡಿ ಗಟ್ಯಾಗಿ ಕೂಗಿದರೆ ಸ್ವಲ್ಪ ಕೇಳಬರುವದು. ಇದಲ್ಲದೆ ಬಾಲ್ಯಾರಭ್ಯದಿಂದ ಕಿವಿ ಕೇಳದಂಥ ಘನ ಬಧಿರಂಗೆ ಶಬ್ದಜ್ಞಾನವು ತಲೆದೋರದು. ಇದಕ್ಕೆ ದೃಷ್ಟಾಂತವೇನೆಂದರೆ ಜಾತ್ಯಂಧಕನಿಗೆ ಸ್ವಪ್ನವಾದರೆ ಕೇಳಿದಂತೆ ಸ್ವಪ್ನವಾಗು ವದಲ್ಲದೆ ಕಂಡಂತೆ ಆಗದು. ಮತ್ತು ಘನ ಬಂಧಿರಂಗೆ ಕನಸಾದರೆ ಕಂಡಂತೆ ಆಗುವದಲ್ಲದೆ ಕೇಳಿಕೆಯಂತಾಗದು. ಈ ದೃಷ್ಟಾಂತದ ಹಾಗೆ ಶ್ರವಣವಿಲ್ಲದವನಿಗೆ ಯಾವ ವಿಷಯದಲ್ಲಾದರೂ ಶಬ್ದಜ್ಞಾನ ಬೋಧೆಯಾಗದು. "ಮನೋನೇತ್ರಾಣಿ ಇಂದ್ರಿಯಂ" ಕೇಳಿದಂತೆ ಕಂಡರೆ ಬುದ್ಧಿಗೆ ನಿಶ್ಚಯವಾಗುವದು. ಕೇಳಿದಷ್ಟು ಕಾಣಬೇಕೆಂಬುವದೇ ಜ್ಞಾನವ ನಿಶ್ಚಯವು. ಮತ್ತು ಅಕ್ಷರ ಮಧ್ಯದಲ್ಲಿ ಶಬ್ದವಡ- ಗಿರ್ಪುದು. ಆ ಶಬ್ದದ ಮಧ್ಯದಲ್ಲಿ ಅನ್ವಯವಡಗಿರ್ಪುದು. ಆ ಅನ್ವಯತ್ವದಿಂದ ಫಲಸಿದ್ಧಿಯಾಗುವದು. ಅದು ಕಾರಣ ಈ ಗ್ರಂಥಸಾರವನ್ನು ಸರ್ವರೂ ಮನಃ ಪೂರ್ವಕವಾಗಿ ಕೇಳಿ ತಿಳಿದರೆ ಇದರ ವಿಷಯದಲ್ಲಿ ಸರ್ವ ಜ್ಞಾನ ಹುಟ್ಟಿ ಮಾಡಿ ಉಣ್ಣಬೇಕೆಂಬ ಬುದ್ಧಿಯೂ ದೃಢವಾಗುವದು. ಶ್ರವಣದಿಂದ ಮನನವಾಗು- ವದು. ಮನನದಿಂದ ನಿಜಧ್ಯಾಸವಾಗಿ ನಿಶ್ಚಯಗೊಳ್ಳುವದು. ಮತ್ತು ಲೌಕಿ- ಕಾಚಾರವಾದ ಈ ಕೃಷಿಜ್ಞಾನಾದಿ ಶಾಸ್ತ್ರಂಗಳಿಗಾದರೂ ಪಾರಮಾರ್ಥಾಚಾರ ದಲ್ಲಿ ಮೋಕ್ಷಪ್ರದವಾದ ಜ್ಞಾನಶಾಸ್ತ್ರಂಗಳಿಗಾದರೂ ಶ್ರವಣ ಮನನಾದಿಗಳೇ ಮುಖ್ಯವು. ದುರ್ವಾದ ಆಲಸ್ಯ ಅವಿಶ್ವಾಸಂಗಳೇ ಸಂಸಾರಕ್ಕೆ ವಿಘ್ನತ್ರಯಂ ಗಳು. ಇವುಗಳಿಂದ ದರಿದ್ರುತನವೆಂಬ ಘನ ದುಃಖವು ಪ್ರಾಪ್ತಿಸುವದು. ಮತ್ತು ಮೋಕ್ಷಕ್ಕೆ ಅಜ್ಞಾನ ಸಂಶಯ ವಿಪರೀತಂಗಳೆಂಬವೇ ವಿಘ್ನತ್ರಯಂಗಳಾಗಿ ಭವದುಃಖವನುಣಿಸುತ್ತಿಹವು. ಅದು ಕಾರಣ ವಿಘ್ನತ್ರಯ ಪರಿಹಾರಕ್ಕೆ ಶ್ರವಣ

ಮನನ ನೀಜಧ್ಯಾಸಂಗಳೇ ಮುಖ್ಯವಾಗಿರುವದರಿಂದ ನೀಜಗುಣಾರ್ಯರ ಶಾಸ್ತ್ರದಲ್ಲಿ ಸ್ಪಷ್ಟವಾಗಿ ಶ್ರವಣಾತಿಶಯವನ್ನು ಶೃತ್ಯರ್ಥ ಸಮ್ಮತವಾಗಿ ಹೇಳಿದ್ದಾರೆ. ಮತ್ತು ಈ ಗ್ರಂಥದಲ್ಲಾದರೂ ದುರ್ವಾದ ಆಲಸ್ಯ ಅವಿಶ್ವಾಸವೆಂಬ ವಿಘ್ನತ್ರಯಂಗಳಿಂದ ಸಂಸಾರದ ಸಾರ ಕೆಟ್ಟು ದಾರಿದ್ರ್ಯವೆಡೆಗೊಂಡಿರುವದು. ಆ ದಾರಿದ್ರ್ಯ ದುಃಖ ಪರಿಹಾರಕ್ಕೋಸ್ಕರ ಜಗದುಪಕಾರವಾಗಿ ನಿರ್ಮಿಸಲ್ಪಟ್ಟ ಈ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥಸಾರ ಯಾವತ್ತನ್ನು ಮನಃಪೂರ್ವಕವಾಗಿ ಕೇಳಿ ತಿಳಿಯುವದರಿಂವ ತಕ್ಕಮಟ್ಟಿಗಾದರೂ ತನ್ನ ಶಕ್ತ್ಯಾನುಸಾರ ಪ್ರಯತ್ನ ಮಾಡಿ ಬದುಕಬೇಕೆಂಬ ಬುದ್ಧಿಯು ಧೃಢವಾಗುತ್ತದೆ. ಅದರಿಂದ ದಾರಿದ್ರ್ಯ ದುಃಖ ಬಿಡುಗಡೆಯಾಗಿ ಸುಖವನ್ನು ಕೊಡುತ್ತದೆಯಾದ ಕಾರಣ ಈ ಗ್ರಂಥವನ್ನು ಚೆನ್ನಾಗಿ ಕೇಳಿ ತಿಳಿಯುಬೇಂದು ಪ್ರಾರ್ಥಿಸುವೆನು.

## ಪುಣ್ಯಾತಿಶಯವು.

ಸತ್ಪುಣ್ಯ ಸ್ವರೂಪಿಗಳಾದ ಸದ್ಬುದ್ಧಿಯುಳ್ಳವರಿಗೆ ಈ ಕೃಷಿಜ್ಞಾನವನ್ನು ಹೇಳಿದರೆ ಅವರು ಚೆನ್ನಾಗಿ ಗ್ರಹಿಸಿ ಇದರಲ್ಲಿರುವ ಸಮಸ್ತ ಯುಕ್ತಿಗಳನ್ನು ಊಹಿಸಿ ತಿಳಿದು ಪ್ರಯತ್ನದಿಂದ ಕೃಷಿಕೆಲಸದ ಸರ್ವಾರಂಭವನ್ನು ಮಾಡಿಸಿ ಮಹದೈಶ್ವರ್ಯ ಸಂಪನ್ನರಾಗುವರು. ಪುಣ್ಯಹೀನರಿಗೆ ಎಷ್ಟುಮುಖದಿಂದ ಜ್ಞಾನೋದಯವಾಗಲೆಂದು ಹೇಳಿದಾಗ್ಯಾದರೂ ಮಾಡಿ ಉಣ್ಣಬೇಕೆಂಬ ಇಚ್ಛೆಯು ಹುಟ್ಟದೆ ಹೋಗುವದು. ಇದಕ್ಕೆ ದೃಷ್ಟಾಂತವೇನಂದರೆ ಘನಬಧಿರಂಗೆ ಎಷ್ಟು ಗಟ್ಟಿಯಾಗಿ ಕೂಗಿ ಹೇಳಿದಾಗ್ಯಾದರೂ ಹೇಗೆ ಕೇಳಬರುವದಿಲ್ಲವೋ ಹಾಗೆ ಪುಣ್ಯಹೀನಂಗೆ ಈ ಶಾಸ್ತ್ರದ ರುಚಿಯು ತೀಳಿಯದೆ ಹೋಗುವದು. ಪೂಣ್ಯಾನುಕೂಲವೇ ಪ್ರಯತ್ನವು. ಪುಣ್ಯಹೀನತ್ವವೇ ಆಲಸ್ಯವೆಂಬ ಮೈಗಳ್ಳತನವು, ಅದು ಯಾವನಲ್ಲಿ ನೆಲೆಗೊಳ್ಳುವದೋ ಅವನು ಪರಾನ್ನಕ್ಕಾಸೆ ಮಾಡುವವನು. 'ಸುಡು ಸುಡು ಪರಾನ್ನಾಪೇಕ್ಷಿತಾ ಜಿಹ್ವೆಯಂ' ಎಂಬ ನೀತಿಯುಂಟಾಗಿ ಮಾಡಲಾರದೆ ಮೈಗಳ್ಳತನದಿಂದ ಆಶಾ ಪಾಶಕ್ಕೊಳಗಾಗಬಾರದು.

## ಆಶಾನಿರಸನ.

॥ಶ್ಲೋಕ॥ ಆಶಾಬದ್ಧತೇ ಲೋಕೇ । ಕರ್ಮಣಾ ಬಹು ಚಿಂತಯಾ । ಆಶಾ ಪರಮಂ ದುಃಖಂ । ನಿರಾಶಾ ಪರಮಂ ಸುಖಂ" ಎಂಬ ಶಾಸ್ತ್ರ ಪ್ರಮಾಣ ಉಂಟಾಗಿ ಲೌಕಿಕರೆಲ್ಲರು ಕೃಷಿ ಮುಂತಾದ ಕಾರ್ಯಂಗಳ ಮಾಡುವಲ್ಲಿ ಪ್ರಯತ್ನ ಮುಖದಿಂದ ತನುವ ದಂಡಿಸಿ ವಿಶ್ವಾದಿಂದ ಮಾಡಿ ಸಕಲ ಸಂಪತ್ತನ್ನು ಪಡೆಯಲಾರದೆ ಮೈಗಳ್ಳತನದಿಂದ ಅನಿರ್ವಾಹ ಪಕ್ಷಕ್ಕೆ ಅಲ್ಪ

ಸ್ವಲ್ಪ ಕಾರ್ಯಗಳನ್ನು ಆದಷ್ಟಾಗಲಿ ಎಂದು ಅಲಸತ್ವದ ಬೇಸರದಿಂದ ಮಾಡಿ ದಲ್ಲಿ ಸರ್ವಾರಂಭದ ಕ್ರಮದ ಯುಕ್ತಿಗಳು ತಪ್ಪಿ ಹದಬೆದೆಗಳು ಮೀರಿದ ಕಾರಣ ಅಲ್ಪ ಸ್ವಲ್ಪ ಧಾನ್ಯಾದಿಗಳು ಅಥವಾ ಅಲ್ಪ ಸ್ವಲ್ಪ ದ್ರವ್ಯವಾದರು ದೊರೆಯುವದರಿಂದ ಅದು ಅನ್ನವಸ್ತ್ರಕ್ಕೆ ಸಾಲದಾಗಿರುವದರಿಂದ ಪುಣ್ಯಶಾಲಿ- ಗಳಾದ ಧನಧಾನ್ಯ ಸಂಪನ್ನರಲ್ಲಿಗೆ ಹೋಗಿ ಕಡ ಬಡ್ಡಿ ಸಾಲಗಳನ್ನು ಕೇಳು ತ್ತಿರಲು ಅವರು ಇವನ ಮೈಗಳ್ಳಗತನದ ಸ್ವಭಾವವನ್ನು ಬಲ್ಲವರಾದುದರಿಂದ ಇವನಿಗೆ ಕೊಟ್ಟು ದ್ರವ್ಯವು ತಿರುಗಿ ಬರಲಾರದೆಂದು ತಿಳಿದು ಕೊಡದೇ ಇದ್ದಲ್ಲಿ ಹೊಟ್ಟೆಗೆ ಅನ್ನವ ಕಾಣದೆ ಹಸುವಿನಿಚ್ಛಾಧೀನನಾಗಿ ಹಬ್ಬ ಹುಣ್ಣಿವೆ ಸೋವು ವಾರ ಮಂಗಳವಾರವೆಂಬ ವಾರತಿಥಿಗಳನ್ನು ಪರೀಕ್ಷಿಸುತ್ತ ಮತ್ತು ನೆರೆಹೊರೆ ಮನೆಗಳಲ್ಲಿ ಬೀಗರು ಆಪ್ತರು ಸ್ನೇಹಿತರು ಬಂದ ಸಮಯದಲ್ಲಿ ಯಾರೇನು ಮಾಡ್ಯಾರೋ ಎಂದು ನೀಕ್ಷಿಸುತ್ತ ಇದ್ದಲ್ಲಿ ಸಕಲೈಶ್ವರ್ಯ ಸಂಪನ್ನರು ಯಾವ ದಾದರೊಂದು ಕಾರ್ಯ ನಿಮಿತ್ಯ ಅಥವಾ ಹಬ್ಬದ ನಿಮಿತ್ಯ ಇಲ್ಲವೇ ಆಪ್ತ ರಿಷ್ಟರ ನಿಮಿತ್ಯ ಸಂಭ್ರಮದಿಂದ ಹೋಳಿಗೆ ಹುಗ್ಗಿ ಕರ್ಚಿಕಾಯಿ ಕಡಬು ಕಜ್ಜಾಯಗಳನ್ನು ಮಾಡಿದ ವಾಸನೆಯ ತಿಳಿದು ಅವರು ಉಂಬುವ ವೇಳೆಗೆ ಹೋಗಿ ಅವರ ಮನೆಯ ಮುಂದೆ ನಿಂತು ಹಬ್ಬವ ಮಾಡಿದ ಹರದಿಯರಿರಾ ಹಲವರೆಲ್ಲರು ಉಂಡು ಪರಿಣಾಮವೇ, ಎಂಬ ಬಣ್ಣದ ಮಾತಿನ ಗುಪ್ತ ಯಾಚನೆಯ ಸಂಜ್ಞಾಭಾವವನ್ನು ತೋರಿಸುತ್ತ, ಸುಳಿದಾಡುವ ಲಕ್ಷಣವನ್ನು ತಿಳಿದು ಪುಣ್ಯಶಾಲಿಗಳಾದರೆ ಕರೆದೊಯ್ದು ಉಣಿಸಿರುವರು. ಮತ್ತು ಅಲ್ಪ ಜನರುಗಳಾದರೆ ಈ ಸಂಜ್ಞೆಯನ್ನು ತಿಳಿದು ಮಾತಾಡದೇ ಇರುವರು. ಆ ಭಾವವನ್ನು ತಿಳಿದು ಈ ಗುಪ್ತಯಾಚಕನು ಹಿಂದಿರುಗಿ ಹೋಗುವಾಗ ಹಸಿವೆ ಯಾಶೆಯಿಂದ ಕರಳು ಸುಟ್ಟಂತಾಗಿ ಹೊಟ್ಟೆ ಉರಿಯಲು ತಾನು ಗ್ರಹಸ್ಥನೆಂಬ ಧರ್ಮಕ್ಕೆ ತಪ್ಪಿ ಹಸುವಿನಿಚ್ಛೆಗೆ ಪ್ರಕಟಯಾಚಕತ್ವದಿಂದ ಅವರಿವರೆನ್ನದೆ ಎಲ್ಲರ ಬೇಡಿದಲ್ಲಿ ಯಾರೇನು ಕೊಡದೇ ಹೋದ ಕಾಲದಲ್ಲಿ ಕಳವು ಹಿಂಸಾದಿ ದ್ರೋ- ಹಂಗಳಿಗೆ ಹೇಸದೆ ಪರದ್ರವ್ಯಂಗಳನಪಹರಿಸುತ್ತ ಸೆರೆಮನೆಯ ಸಂಕೊಲೆಯ ಬಂಧನಕ್ಕೊಳಗಾಗಿ ಮಾನಹೀನನೆನಿಸಿ ನರಕ ಯಾತನೆಗೆ ಪಾತ್ರನಾಗಿ ಭೂಭಾರಕ ನಾಗಿ ಅನ್ನ ಶತೃವಾಗಿ ದಾರಿದ್ರ್ಯದೋಷಿಯಾಗಿ ಖಲಜನರೆನಿಸಿ ಅವಮರ್ಯಾದೆ ಯಿಂದ ಜೀವನವನ್ನು ಮಾಡುವನು.

ಮತ್ತು ಪ್ರಾಜ್ಞರಾದವರು ಭೂಮಿಯನ್ನು ನಂಬಿ ವಿಶ್ವಾಸಿಸಿ ಕೃಷಿ ಮುಂತಾದ ಕಾಯಕಂಗಳ ಮಾಡಿ ಧನಧಾನ್ಯ ಮೊದಲಾದ ಸಕಲ ಸಂಪ- ತ್ತನ್ನು ಪಡೆದು ದಾನಧರ್ಮ ಪರೋಪಕಾರಗಳನ್ನು ಮಾಡುತ್ತ ಸದಾ ಕಾಲ

ಗಳಲ್ಲಿ ಸಕಲಸುಖ ಭೋಗಂಗಳ ಭೋಗಿಸುತ್ತ ಆರಗಾಲ ಬರಗಾಲಂಗಳಲ್ಲಿ ಸಹ ನಿತ್ಯದಲ್ಲಿಯೂ ಸುಭಿಕ್ಷಕಾಲದಂತೆ ಸಹಜವಾದ ಊಟ ಸಹಜವಾದ ಉಡಿಗೆ ಸಹ ಜವಾದ ತೊಡಿಗೆಗಳಿಂದ ಯಥಾಪ್ರಕಾರವಾಗಿ ಸುಖದಿಂದಿರುವರು, ಮತ್ತು ಮೈಗಳ್ಳರಾದವರು ಕೃಷಿ ಮೊದಲಾದ ವ್ಯಾಪಾರಂಗಳ ಮಾಡಲಾರದೆ ಬೆಕ್ಕು ನಾಯಿಗಳು ಪರಾನ್ನಕ್ಕೆ ಆಸೆ ಮಾಡಿ ಬಾಲವ ಗುಂಡಾಡಿ ಸುತ್ತ ಧನಪಾಲರ ಕಾಲಲ್ಲಿ ಸುಳಿದಾಡುವಂತೆ ಆಲಸತ್ವದಿಂದ ಮಾಡಲಾರದೆ ಬೇಸರಗೊಂಡ ಕಾರಣ ಋಣಭಾರಕರಾಗಿ ಊಟಕ್ಕೆ ಕಾಣದೆ ಅಷ್ಟಿಷ್ಟು ಗೋದಿಯ ಬೀಸಿ ಕೊಂಡುಂಡು ಉಡುವದಕ್ಕೆ ಕಾಣದೆ ಹಿರಿಯರು ಸಂಪಾದಿಸಿದ ಧಡಿದೋತ್ರ ಬಣ್ಣದ ಸೀರೆಗಳು ಮುಂತಾದ ವಸ್ತ್ರಗಳನ್ನು ಉಟ್ಟು ತೊಟ್ಟು ತಿರುಗಾಡುತ್ತಿದ್ದಲ್ಲಿ ಇವರು ಋಣಭಾರಕ ರಾಗಿ ಉಂಬುವದಕ್ಕೆ ಕಾಣದೆ ಗೋದಿಯ ಬೀಸಿದ್ದಾರೆ ಉಡುವದಕ್ಕೆ ಕಾಣದೆ ಬಣ್ಣ ವನುಟ್ಟಿದ್ದಾರೆಂದು ಹಾಸ್ಯವ ಮಾಡಿದಾಗ್ಯಾದರೂ ಲಜ್ಜಾಯುತನಾಗಿ ಮುಖವ ತಗ್ಗಿಸುವರು. ಎಷ್ಟು ಲಜ್ಜೆ ಇದ್ದಾಗ್ಯಾದರೂ ಪರಮೇಶ್ವರನನ್ನು ಕುರಿತು ಪ್ರಾರ್ಥಿಸಿ ಸತ್ಯಕಾಯಕದಿಂದ ಮಾಡಿ ಉಣ್ಣಬೇಕೆಂಬ ಬುದ್ಧಿ ಕಡಿಮೆಯಾಗಿ ಹಸಿ ವೆಂಬುದು ಪ್ರತ್ಯಕ್ಷ ಬ್ರಹ್ಮೇತಿಯಂತೆ ಉಪದ್ರವ ಕೊಟ್ಟ ಕಾರಣ ಹಸಿವೆಯನ್ನು ಸೈರಿಸಲಾರದೆ ಮೈಗಳ್ಳತನದ ಅಭ್ಯಾಸದಿಂದ ಮಾಡಲಾರದೆ ಯಾರೇನು ಕೊಟ್ಟಾ ರೆಂದು, ಯಾರೇನು ನೀಡ್ಯಾರೆಂದು, ಕೆಲವು ದಿವಸ ಗುಪ್ತಯಾಚಕನಾಗಿ ಪರಾನ್ನಕ್ಕೆ ಆಶೆ ಮಾಡಿ, ಬಹು ಜನರನ್ನು ಆಶ್ರಯಿದಾಗ್ಯಾದರೂ ಯಾರೂ ನೀಡದಿದ್ದರೆ ಹೊಟ್ಟೆ ಸುಟ್ಟು ಆಶೆ ಹೆಚ್ಚಾಗಿ ಗಾಂಭೀರ್ಯ ಹೀನತ್ವದಿಂದ ಬಹು ಜನರನ್ನು ಬೇಡುತ್ತಿರಲಾಗಿ ಕೆಲವರು ನೀಡುವರು, ಕೆಲವರು ಧಿಕ್ಕಾರ ಮಾಡುವರು, ಹೀಗಾಗಿ ಅಗೌರವತ್ವದಿಂದ ಪ್ರಕಟ ಯಾಚಕನಾಗಿ ಬೇಡಿದಾಗ್ಯಾದರೂ ಹೊಟ್ಟೆಗೆ ಸಾಲದೆ ಹೋದಲ್ಲಿ ಕಳವು ಕ್ಷುದ್ರ ಹಿಂಸಾದಿ ಕ್ರೂರ ಕರ್ಮಗಳಿಂದ ಪರದ್ರವ್ಯಾಪಹಾರಿ ಯಾದರೆ ಇಹಲೋಕ ಪರಲೋಕವೆಂಬ ಉಭಯಲೋಕ ಭ್ರಷ್ಟನಾಗಿ ಖಲಜ ನರೆನಿಸಿ ನೀಚ ವರ್ತನೆಯಲ್ಲಿ ಜೀವನವನ್ನು ಮಾಡುವನಲ್ಲದೆ ಯುಕ್ತಿಯಿಂದ ಮಾಡಿ ಉಣ್ಣಬೇಕೆಂಬ ಬುದ್ಧಿ ಹುಟ್ಟದು. ಬುದ್ಧಿಹೀನತ್ವದಿಂದ ಮೈಗಳ್ಳತನವು, ಆ ಮೈಗಳ್ಳತನದ ಫಲವೇ ದಾರಿದ್ರ್ಯ ದುಃಖವು. ಆ ದಾರಿದ್ರ್ಯದುಃಖದಿಂದ ದುಷ್ಟವರ್ತನೆಯು ಪ್ರಾಪ್ತಿಸಿ ಅನರ್ಥ ಸಾಧನವಾಗುವದು. ಮತ್ತು ಬುದ್ಧಿ ಶಾಲಿಗಳಾಗಿ ಸದಾಚಾರ ಸತ್ಕಾಯದಿಂದ ಮಾಡಿ ಉಂಬುವನಿಗೆ ದಾರಿದ್ರ್ಯವಿ- ರಬಹುದೆ ? ಒಂದು ವೇಳೆ ಮಾಡುವವನೊಬ್ಬನಾಗಿ ಉಂಬುವವರು ಬಹಳ ಮಂದಿಯಾದರೆ ಘನಸಂಪತ್ತಿಲ್ಲದಿದ್ದರೂ ಅನ್ನ ವಸ್ತ್ರಕ್ಕೇನು ತಾಪತ್ರಯವಿಲ್ಲವು.

ಈ ಲೋಕದ ಸಮಸ್ತ ಬುದ್ಧಿಹೀನ ಜನರ ದಾರಿದ್ರ್ಯವನ್ನು ದೂರ ಮಾಡುವ ದಕ್ಕಾಗಿಯೂ ಭೂಲೋಕದ ಸಮಸ್ತ ಜನರಿಗೆಲ್ಲರಿಗೂ ಘನ ಸಂಪತ್ತನ್ನು ಕೊಡು

ವದಕ್ಕಾಗಿಯೂ ಲೋಕೋಪಕಾರವಾದ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥ ರಚಿಸಲ್ಪಡುವದಾಯಿತು. ಮತ್ತು ಈ ಲೋಕದ ಸಮಸ್ತ ಪ್ರಾಣಿಗಳ ರಕ್ಷಣಾರ್ಥಕ್ಕೆ ಅನ್ನೋದಕವೇ ಮುಖ್ಯವಾದ ಕಾರಣ ಈ ಕಲಿಯುಗದಲ್ಲಿ ಉದ್ಭವಿಸಿದ ಪ್ರಾಣಿಗಳು ಯಾವತ್ತು ಅನ್ನಗತ ಪ್ರಾಣಿಗಳಾದುದರಿಂದ ಅನ್ನ ಕಡಿಮೆಯಾದಾಗಲೇ ಆಯುಷ್ಯವು ಕಡಿಮೆಯಾಯಿತೆಂದು ತಿಳಿಯಬೇಕು.

## ಅನ್ನಾತಿಶಯವು

ಪ್ರಾಣಿ ಮಾತ್ರಗಳ ಯಾವತ್ತರ ಪ್ರಾಣಾಧಾರಕ್ಕೆ ಅನ್ನವೇ ಮುಖ್ಯವಾದ ಕಾರಣ ಅನ್ನದ ವಿಶೇಷ ವರ್ಣನೆಯನ್ನು ಬಹು ಜನ ಪ್ರಾಜ್ಞರು ಹೇಳಿದ್ದಾರೆ.

॥ಸಾಕ್ಷಿ॥ ಕೂಳು ಕೂಟವೇ ಕೂಟ ಕೂಳು ಮೇಳವೇ ಮೇಳ ಕೂಳೊಂದುಗಳಿಗೆ ತಪ್ಪಿದರೆ ಪಾತರದ ಮೇಳ ಮುರಿದಂತೆ ಸರ್ವಜ್ಞ॥ ಎಂದು ಸರ್ವಜ್ಞ ಮೂರ್ತಿಗಳ ವಾಕ್ಯವುಂಟು. ಮತ್ತು ಹಸಿವೆಯ ವೇಳೆಗೆ ಅಶನವು ದೊರೆತರೆ ಭಸಿತಧಾರಕರಾದ ಸನ್ಯಾಸಿಗಳಾದರೂ ಕುಸುಮ ಶರನಂತೆ ಸ್ತ್ರೀಲೋಲರಾಗುವರು. ಅಶನವು ವೇಳೆಗೆ ದೊರೆಯದಾವಲ್ಲಿ ಕುಸುಮಶರನಾದರೂ ಸನ್ಯಾಸಿಯಂತೆ ಸ್ತ್ರೀ-ವ್ಯಸನವನ್ನು ತೊರೆದು ಗಾಂಭೀರ್ಯಹೀನನಾಗಿ ಅಗೌರವತ್ವದಿಂದ ಭಿಕ್ಷಕ್ಕೆ ಪೋಗನೆ ? ॥ಸಾಕ್ಷಿ॥ ಅನ್ನ ರಸಂ ಜಾತ ಅತಿವೆಲು ಪುರುಷಲು। ಯೆಪುರೇಗಿನ ಮದನಡೇ ಚ ನಂಚು॥ ಅನ್ನ ಮುಡುಗಿನಯನಕ। ಅತಡೆಂದು ಬೋಯನೋ। ವಿಶ್ವತಾಭಿರಾಮುವಿನರವೇಮಾ॥ ಇದರ ಅನ್ವಯ। ವೆನೆಂದರೆ ಅನ್ನರಸದಿಂದ ಸ್ತ್ರೀ-ಪುರುಷರು ಸೊಕ್ಕಿದರೆ ಮನ್ಮಥನ ಕ್ರಿಡೆ ವಿಶೇಷವಾಗುವದು, ಅನ್ನ ತಪ್ಪಿದ ಬಳಿಕ ಮನ್ಮಥನು ಯಾವ ಕಡೆಗೆ ಹೋದನೋ ಎಂಬ ಅಭಿಪ್ರಾಯವು.

ಅನ್ನವ ಬಿಟ್ಟವನ ಬಳಿಗೆ ಸನ್ಮತ ಮೋಹನಾಂಗಿಯಾಳಾದ ಕನ್ಯಪ್ರಾಯದ ಸ್ತ್ರೀಯಳು ಬಂದು ಕಾಮಕಲೆಯ ಸನ್ನೆಯ ಚೇಷ್ಟೆಯಿಂದ ಕರೆದಾಗ್ಯಾದರೂ ಇನ್ನಾರಿಗೆ ಬೇಕೆಂದು ಉಪೇಕ್ಷೆ ಮಾಡುವನು. ಮತ್ತು ಅನ್ನಪೂರ್ಣವಾದಲ್ಲಿ ಅಖಿಳಶಾಸ್ತ್ರ ಯಂತ್ರ ಸನ್ನುತ ಗಾಯನ ಹಾಸ್ಯರಸ ಚೇಷ್ಟೆಗಳಲ್ಲದೆ ಅನ್ನತಪ್ಪಿದರವುಗಳೊಂದು ಇಲ್ಲವು. ಅದುಕಾರಣ ಅನಂತ ಶಾಸ್ತ್ರಂಗಳೆಲ್ಲ ಅನ್ನದ ಮಕ್ಕಳೆಂಬ ಲೋಕದ ಗಾದೆಯುಂಟು. ಇದಲ್ಲದೆ.

॥ಸಾಕ್ಷಿ॥ ಅನ್ನ ಪರಬ್ರಹ್ಮಮುಯ್ಯುಕ್ನದನ್ನಂ। ಅನುಚುಮೆಮಿನ್ನಂ। ಆತ್ಮಲೋಗನ್ನಂ। ಎಂಬ ಆಂಧ್ರ ಪಂಡಿತರ ವಚನ ಉಂಟಾಗಿ ಅನ್ನವು ಆತ್ಮತೃಪ್ತಿಯ ಪದಾರ್ಥವಾದ ಕಾರಣ ಸಕಲ ರಸರಸಾಯನ ಪದಾರ್ಥವಾದ ದಿವ್ಯಾನ್ನ

ದೇವಾನ್ನ ರಾಜಾನ್ನ ಪರಮಾನ್ನ ಮೊದಲಾದ ಸಮಸ್ತ ಸುಭೋಜನವೆನುಂಡು ಪರಿಣಾಮಿಯಾಗಿದ್ದರೆ ಸಕಲ ಚಾತುರ್ಯ ಕಲಾಕೌಶಲ್ಯ ರಾಗ ರಸ ಹಾಸ್ಯ ವಿನೋದ ವಿಲಾಸಗಳು ಮತ್ತು ಮಂತ್ರ ಶಾಸ್ತ್ರ ನೀತಿ ಸ್ತೋತ್ರ ಪುರಾಣ ಇತಿಹಾಸ ತಾಳ ಮೃದಂಗ ವೀಣಾದಿ ಲೆತ್ತಪಗಡೆ ಚದುರಂಗ ಗಂಜೀಪ ಮೊದಲಾದ ವಿನೋದ ಪ್ರಸಂಗ ಸ್ತ್ರೀಸಂಗ ಮುಂತಾದ ಆನಂದಕರ ಕಾರ್ಯಗಳೆಲ್ಲ ಜರಗುತ್ತಿಹವು. ಅನ್ನವು ಕ್ಷಣಮಾತ್ರ ತಡೆದರೆ ವಡಬಾಗ್ನಿ ತಾಪದಿಂದ ಕರುಳು ಸುಟ್ಟು ಕಳೆಗುಂದಿ ಮುಖಬಾಡಿ ಸಕಲ ವಿನೋದಂಗಳೆಲ್ಲ ತಪ್ಪಿ ಆಯಸಗೊಂಡಂತೆ ಅವಯುವಾದಿಗಳ ತ್ರಾಣವೆಲ್ಲ ನಿಸ್ಸಾರವಾಗಿ ಸಕಲ ಪ್ರಸಂಗಗಳಲ್ಲಿ ರುಚಿ ತಪ್ಪಿ ಬಿದ್ದಲ್ಲಿ ಬೀಳುವರಲ್ಲದೆ ಎದ್ದು ತಿರುಗಾಡುವದಕ್ಕೆ ಆಯಾಸವಾಗುವದು. ಹತ್ತೆಂಟು ದಿವಸ ಅನ್ನವಿಲ್ಲದಿದ್ದರೆ ಕ್ಷಯರೋಗಿಯಂತೆ ಶರೀರ ಕ್ಷೀಣವಾಗುವದು. ಇಪ್ಪತ್ತೊಂದು ದಿವಸ ಅನ್ನವಿಲ್ಲದಿದ್ದರೆ ನೇತ್ರಪ್ರಕಾಶವು ಅಡಗುವದು. ಮತ್ತು ಮೂವತ್ತು ದಿವಸಕ್ಕೆ ಸರ್ವೇಂದ್ರಿಯಂಗಳು ಕೆಡುವವು. ನಾಲ್ವತ್ತು ದಿವಸಕ್ಕೆ ಪ್ರಾಣ ಹೋಗುವದು. ಆದು ಕಾರಣ ಅನ್ನದ ಮಕ್ಕಳು ಅಖಿಳಮಂತ್ರ ಶಾಸ್ತ್ರ ಸಂಗೀತ ಸಾಹಿತ್ಯಂಗಳು ಎಂಬುವದು ನಿಶ್ಚಯವೇ ಸರಿ.

ಈ ಲೋಕದ ಸಮಸ್ತ ಭೋಗ ಪುರುಷರಾದ ವೀರರಿಗೆ ಧೀರರಿಗೆ ವೇದಾಗಮ ಪುರಾಣ ಶಾಸ್ತ್ರ ಪಂಡಿತರಾದ ಪ್ರಾಜ್ಞರಿಗೆ ಪ್ರೌಢರಿಗೆ ಸಂಗೀತ ಸಾಹಿತ್ಯಾದಿ ಗಾನಲೋಲರಿಗೆ ಸಕಲ ಕಲಾಕೌಶಲ್ಯ ಚಾತುರ್ಯತರ ಕಾರ್ಯಕರ್ತರಿಗೆ ಕೃಷಿವಾಣಿಜ್ಯಾದಿ ಷಟ್ಕೃಷಿ ವ್ಯಾಪಾರಿಗಳಿಗೆ ಸಂಸಾರಿಗಳಿಗೆ ಸನ್ಯಾಸಿಗಳಿಗೆ ಮೊದಲಾದ ಸಮಸ್ತರಿಗೂ ಅನ್ನವೇ ಮುಖ್ಯವಲ್ಲದೆ, ಅನ್ನವಿಲ್ಲದಿರೆ ಲಿನ್ನೆತ್ತಣ ಸಂಭ್ರಮವೆಂದ ಹಾಗೆ ಮತ್ತು ಅನ್ನ ವೆಗ್ಗಳವಾಗಲಖಿಳ ಚಾತುರ್ಯಗಳು, ಅನ್ನತಪ್ಪಿದರವುಗಳೆತ್ತ ಹೋಗುವವೋ ಎಂಬ ಹಾಸ್ಯಕ್ಕೆ ಕಾರಣವಾಗುವದು.

ಸಕಲ ಪ್ರಾಣಿಗಳೆಲ್ಲರಿಗೂ ಮನುಷ್ಯರುಗಳೆಲ್ಲರಿಗೂ ಶರೀರ ಪೋಷಣೆಗೆ ಅನ್ನ ಪಾನಾದಿಗಳೇ ಮುಖ್ಯವಲ್ಲದೆ ಅನ್ನಪಾನಾದಿಗಳು ತಪ್ಪಿದರೆ ನುಣ್ಣನ್ನ ಶರೀರವೆಲ್ಲ ಬಣ್ಣಗುಂದುವದು. ಹಾಗೂ ಕಣ್ಣುಗಳು ಒಳನಟ್ಟು ಮೂಗುದ್ದಾಗಿ ಗೋಣು ಹಾಯ್ದು ಬಹು ಕಾಲದ ತಪೋವೃದ್ಧರಂತೆ ಆಸ್ಥಿಮಯವಾದ ದೇಹವಾಗಿ ಮಾಂಸ ರಕ್ತ ಮೊದಲಾದವುಗಳು ಕಡಿಮೆಯಾಗುವವು. ಸಪ್ತಧಾತುಗಳು ಕ್ಷೀಣವಾಗವವು. ವಾಯು ಗತಿ ಹೆಚ್ಚಾಗಿ ಸರ್ವೇಂದ್ರಿಯಗಳ ತ್ರಾಣ ತಪ್ಪಿ ಅಚೇತನ ಪ್ರಾಣಿಗಳಾಗುವರು. ಮತ್ತು ಅನ್ನಪಾನಾದಿಗಳು ತಪ್ಪಿದ ಕಾಲದಲ್ಲಿ ಸಕಲಭೋಗ ಸಾಧನ ದಿವ್ಯ ಪದಾರ್ಥಗಳೆಲ್ಲ ತಿರಸ್ಕಾರ

